

ಪೊಡಗಂಟಿಮಯ್ಯ ಮಿಮ್ಮು ಪುರುಷೋತ್ತಮಾ ಮಮ್ಮು
ನೆಡಯಕವಯ್ಯ ಕೋನೇಟಿರಾಯಡಾ ||ಪ||

ಕೋರಿ ಮಮ್ಮುನೇಲಿನಟ್ಟಿ ಕುಲದೈವಮಾ ಚಾಲ
ನೇರಿಚಿ ಪೆದ್ದಲಿಚ್ಚಿನ ನಿಧಾನಮಾ
ಗಾರವಿಂಚಿ ದಪ್ಪಿದೀರ್ಚು ಕಾಲಮೇಘಮಾ ಮಾಕು
ಚೇರುವ ಜಿತ್ತಮು ಲೋನಿ ಶ್ರೀನಿವಾಸುಡಾ ||೧||

ಭಾವಿಂಪ ಕೈವಸಮ್ಮೈನ ಪಾರಿಜಾತಮಾ ಮಮ್ಮು
ಚೇವದೇರ ಗಾಚಿನಟ್ಟಿ ಚಿಂತಾಮಣೀ
ಕಾಮಿಂಚಿ ಕೋರಿಕಲಿಚ್ಚೆ ಕಾಮಧೇನುವಾ ಮಮ್ಮು
ತಾಮೈ ರಕ್ಷಿಂಚೇಟಿ ಧರಣೀಧರಾ ||೨||

ಚೆಡನೀಕ ಬ್ರತಿಕಿಂಚೇ ಸಿದ್ಧಮಂತ್ರಮಾ-ರೋಗಾ
ಲಡಚಿ ರಕ್ಷಿಂಚೇ ದಿವ್ಯೌಷಧಮಾ
ಬಡಿಬಾಯಕ ತಿರಿಗೇ ಪ್ರಾಣಬಂಧುಡಾ ಮಮ್ಮು
ಗಡಿಯಿಂಚಿನಟ್ಟಿ ಶ್ರೀ ವೆಂಕಟ ನಾಥುಡಾ ||೩||



ಶ್ರೀ ಅನ್ನಮಾಚಾರ್ಯ.

ಸಂದರ್ಶಿಸಿ. ಆನಂದಿಸಿ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ



# ವಾರ್ಷಿಕ ಬ್ರಹ್ಮೋತ್ಸವಗಳು

3--6--95 ರಿಂದ 12--6--95 ವರೆಗೆ

**ಕಾರ್ಯಕ್ರಮ ವಿವರ**

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 3--6--95 | ಶನಿವಾರ | ---- | ಅಂಕುರಾರ್ಪಣೆ. |
| 4--6--95 | ಭಾನುವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ. |
| 5--6--95 | ಸೋಮವಾರ | ಚಿಕ್ಕ ಶೇಷವಾಹನ. | ಹಂಸವಾಹನ. |
| 6--6--95 | ಮಂಗಳವಾರ | ಸಿಂಹವಾಹನ | ಮುತ್ತಿನ ಚಪ್ಪರ ವಾಹನ. |
| 7--6--95 | ಬುಧವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 8--6--95 | ಗುರುವಾರ | ಮೋಹಿನೀ ಅವತಾರ | ಗರುಡವಾಹನ. |
| 9--6--95 | ಶುಕ್ರವಾರ | ಹನುಮಂತ ವಾಹನ<br>ಸಂಜೆ -- ವಸಂತೋತ್ಸವ | ಗಜವಾಹನ. |
| 10--6--95 | ಶನಿವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 11--6--95 | ಶುಕ್ರವಾರ | ರಥೋತ್ಸವ | ಅಶ್ವವಾಹನ. |
| 12--6--95 | ಗುರುವಾರ | ಅವಭೃಥ, ಚಕ್ರಸ್ನಾನ | ಧ್ವಜಾವರೋಹಣ. |

ನೀವೂ ಬನ್ನಿ ತಿ. ತಿ. ದೇ. ನಿಮ್ಮವರನ್ನೂ ಕರೆತನ್ನಿ



**ಸಂಪುಟ -- 25 ಮೇ 1995 ಸಂಚಿಕೆ --12**

# ವಿಷಯಸೂಚಿ



ಮುಖ ಚಿತ್ರ : ಶ್ರೀ ವೆಂಕಟೇಶ್ವರಸ್ವಾಮಿ, ಹೃಷೀಕೇಶ.

ಹಿಂಬದಿಯಲ್ಲಿ : ಅಂತರ್ವೇದಿ ನರಸಿಂಹಸ್ವಾಮಿ ದೇವಾಲಯ.

ಒಳಗಡೆ : 1) ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ.

2) ಅನ್ನಮಾಚಾರ್ಯ.


ಗೌರವ ಸಂಪಾದಕರು :

ಶ್ರೀ ಎಸ್. ರಮೇಶ್‌ಕುಮಾರ್, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎಸ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಪಿ. ಮೋಹನ್ ರಾವ್

ಲೇಖಕ/ಜಾಹೀರಾತುಗಳಿಗೆ

ಮತ್ತಿವಿವರಗಳಿಗೆ

ಸಂಪಾದಕರು,

ತಿರುಮಲ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**




ಬಹುಮಂದಿ ಭಕ್ತರು ಆಗಿ ಹೋಗಿದ್ದಾರೆ ಭಾರತಾವನಿಯಲ್ಲಿ. ಇಲ್ಲಿಗೂ ಅಲ್ಲಿಗೂ ಸೇತುವನ್ನು ಕಟ್ಟಿ, ತಾವು ನಡೆದದ್ದೇ ಅಲ್ಲದೆ ಇತರರನ್ನೂ ತಮ್ಮೊಂದಿಗೆ ಬರಲು ಕರೆಯುತ್ತಲೇ ಹೋದವರು. ಅವರು ಬಿಟ್ಟು ಹೋದ ಸಾಹಿತ್ಯವೂ ಅಪಾರ. ಅದೇ 'ಅವನ'ನ್ನು ಸೇರುವ ಮಾರ್ಗವಾಗಿ, 'ಅಲ್ಲಿ'ಗೆ ಏರುವ ಸೇತುವೆಯಾಗಿ ನಮ್ಮ ನಡುವೆ ಇದೆ. ಅದನ್ನು ಕಾಣದಾಗಿ ತಡಕಾಡುತ್ತಿದ್ದೇವೆ ನಾವು ಇಂದು, ಇಲ್ಲಿ -- ನಂಬಿಯೂ ನಂಬದಿರುವಿಬ್ಬಂದಿಗಳಂತೆ.

ಅನ್ನಮಾಚಾರ್ಯರು ಇದ್ದದ್ದು ಐದುನೂರು ವರ್ಷದಹಿಂದೆ. ಅವರಿಗೆ ಕಾಣಿಸಿದ್ದು -- ತಿರುಮಲೆಯ ಮೇಲೆ ನೆಲೆಸಿದ ಮೂಲಧನ. ಅವರು ಆ ಮೂಲಧನದ ಮತ್ತಿನಲ್ಲಿ ಹಾಡಿದರು. ಮುಖ್ಯವಾದ ಸಂದೇಶವೆಂದರೆ ನನ್ನ ಈ ಮೂಲಧನ ಕಾಮಧೇನು, ಚಿಂತಾಮಣಿ, ಕಲ್ಪವೃಕ್ಷ ನಿಮ್ಮದೂ ಆಗಬಹುದು -- ನಿಮ್ಮ ತುಸುವೆ ಭಕ್ತಿಯಿಂದ ಎಂಬುದು.

ಹೌದು ಐಹಿಕ ಸಂಪತ್ತು ಹಂಚಿಕೊಂಡರೆ ಕಡಮೆಯಾಗುತ್ತದೆ. ಆದರೆ ಅನ್ನಮಯ್ಯನ ಸಂಪತ್ತು ಹಂಚಿಕೊಂಡಷ್ಟೂ ಹೆಚ್ಚುತ್ತದೆ. ಅದೊಂದು ಆನಂದಸಾಗರ, ಎಲ್ಲೆಯಿಲ್ಲದ್ದು. ಪೂರ್ಣದಿಂದ ಪೂರ್ಣವೇ ಹೊರಬರುವಂತೆ, ಪೂರ್ಣದಲ್ಲಿ ಪೂರ್ಣವನ್ನು ಕಳೆದರೂ ಪೂರ್ಣವೇ ಉಳಿಯುವಂತೆ ಇರುವ ಸಂಪತ್ತು. ಆತ ಅದನ್ನು ಹಂಚಿಕೊಳ್ಳಲು ಸಿದ್ಧರಾಗಿ ಸರ್ವರನ್ನೂ ಕರೆದರು. ಬನ್ನಿ ಬಾಂಧವರೆ, ಈ ದೈವಕ್ಕೆ ಶರಣಾಗುವುದರಿಂದ ಪ್ರಯಾಸ ಕಡಮೆ ಪ್ರಮೋದವಧಿಕ ಎಂದು ಘೋಷಿಸಿದರು. ಅಂದು ಎಷ್ಟು ಮಂದಿ ಕೇಳಿದರೊ, ಇಂದು ಎಷ್ಟು ಮಂದಿ ಕೇಳುತ್ತಿರುವರೊ!

ಮುಖ್ಯ -- ಸ್ವಾಮಿಯ ಸೇವೆಯಲ್ಲಿ ತಲೆ ಹಣ್ಣಾದ ಜೀವ ಅದು. ತನ್ನಂತೆಯೇ ಇತರರೂ ಮೇಲೇರಲು ಎಂದು ಹಾಡಿದ್ದು. ಸ್ವಾಂತ ಸುಖಾಯವಾಗಿಯೇ ಹಾಡಿದ್ದಿರಬಹುದಾದರೂ ಅದರಿಂದ ಸಮಾಜಕ್ಕೆ ಆದ ಪ್ರಯೋಜನ. ನಮಗೂ ಒಂದು ಮೂಲಧನದ ನಿಧಿ ಸಿಕ್ಕಿದ್ದು. ಅವರಿಗೆ ಒಂದು ಖಚಿತ ನಿಲುವು ನಂಬಿಕೆ "ಒಕ್ಕ ಸಂಕೀರ್ತನೇ ಚಾಲು ವೊದ್ದಿಕ್ಕೆ ಮಮ್ಮು ರಕ್ಷಿಂಪ". ಮಿಕ್ಕದ್ದು ಭಂಡಾರದಲ್ಲಿರಲಿ ಎಂದು ಆತ ಘೋಷಿಸಿದ್ದರೂ, ಅವುಗಳಿಂದ ರಕ್ಷಣೆ ಪಡೆಯದೇಕಾದವರು ನಂತರದ ಜನವೇ ಹೊರತು ಬೇರೆಯಲ್ಲ.

ಪ್ರಶ್ನೆ -- ಭಕ್ತಿಯದು. 'ಅವನ'ಲ್ಲಿ ತುಸುಭಕ್ತಿ ಎಲ್ಲರಿಗೂ ಇದ್ದದ್ದೇ. ಅದು ಬೇರೆ ಬೇರೆ ರೂಪದಲ್ಲಿರಬಹುದು; ಮೂಲ ಸ್ರೋತ, ಸೂತ್ರ ಒಂದೇ ಆದ ಭಕ್ತಿ ಇರುವುದೇ, ಆದರೂ ಅದು ಅಭಿವ್ಯಕ್ತವಾಗಲು ಪದಗಳ ಅಗತ್ಯ ಯಾರಿಗಾದರೂ ಉಂಟು. ಇಂತಲ್ಲಿ ಪದಕವಿತಾ ಪಿತಾಮಹ ಅತ್ಯಂತ ಆಪ್ತನಾಗಿ ಅನುಕೂಲಮಾಡಿಕೊಡುತ್ತಾನೆ. ಅರೆ ಮೂಕವಾಗಿದೆ ಭಾವ ವಾಕ್ಕಿನ ನೆರವಿಲ್ಲದೆ ಎಂದಾಗ ಅನ್ನಮಯ್ಯ ವಾಕ್ಕಿನೊಡನೆ ಗೇಯತೆಯನ್ನೂ ಒದಗಿಸುತ್ತಾನೆ ತನ್ನ ಪದಗಳಿಂದ.

ಅನುಭಾವಿ ಅನ್ನಮಯ್ಯನ ಆರಾಧನೆಯಿಂದ 'ಅವನ'ನ್ನು ತಿಳಿಯುವ ಹಾದಿ ಸುಗಮವಾಗಬಲ್ಲದು ಎಂಬುದು ಬಲ್ಲವರ ಮತ. ನಾವು ಆ ಮಾರ್ಗವನ್ನು ಅನುಸರಿಸಲು ಜಯಂತಿಯ ಸಂದರ್ಭವೊಂದು ಸುಸಂಧಿ. ಜೊತೆಗೇ ಅನ್ನಮಾಚಾರ್ಯರ ಹಾದಿಯಿಂದ ಸಾಮಾಜಿಕ, ಮಾನಸಿಕ ಶಾಂತಿ ಸೌಹಾರ್ದಗಳೂ ಸುಲಭಗಮ್ಯವಾಗಬಹುದೆಂಬುದಾದರೆ ಅವಶ್ಯಮಾಚರಣೀಯವೆಂದು ನಿರ್ಧರಿಸಿ ನಡೆವುದೊಳ್ಳೆಯದು.

" ಪೊಡಗಂಟಿಮಯ್ಯ ಮಿಮ್ಮು ಪುರುಷೋತ್ತಮಾ "

* * * * *

ಅಸ್ಥಿಚರ್ಮಮಯ ದೇಹ ಯಹ
ತಾಮೇರು ಜೈಸೀಪ್ರೀತಿ
ಹೋತಕಹೊಂ ಶ್ರೀರಾಮ ಮಹಂ
ಹೋತ ನಯಹ ಭವಭೀತಿ
ಧಿಗ್ ಧಿಗ್ ಐಸೇ ಪ್ರೇಮಕೋ

ವಿಕ್ರಮ ಸಂವತ್ಸರ ೧೫೮೩ ನೇ ಜೇಷ್ಠ ಶುಕ್ಲ ತ್ರಯೋದಶಿ ಗುರುವಾರದಂದು ರತ್ನಾವಲಿಯೊಂ ಗೆ ಕವಿಯ ವಿವಾಹವಾಯಿತು. ಆಕೆ ವಿವಾಹಾ ಂತರ ಒಂದು ದಿನವೂ ತವರು ಮನೆಗೆ ಹೋಗಿ ರಿಲ್ಲ. ಒಂದು ದಿನ ಪತಿಯು ಮನೆಯಲ್ಲಿಲ್ಲ ಾಗ ಅನಿವಾರ್ಯವಾಗಿ ತವರಿಗೆ ಹೋಗುವ ಸಂಗವು ಬಂದಿತು. ಕವಿಗಳು ಬಂದು ನೋಡಿ ಾಗ ಪತ್ನಿಯ ದರ್ಶನವಾಗಲಿಲ್ಲ. ಹನ್ನೆರಡು ವರು ಗಳಾದ ಮೇಲೆ ಅವಳಿಗೆ ತವರಿನ ಹಂಬಲವಾ ಬಹುದು ಎಂದು ಭಾವಿಸಿದ ಕವಿಗಳು ತುಂಬಿ ರಿವ ಪ್ರವಾಹವನ್ನು ಈಜಿಕೊಂಡು ನಡುರಾತ್ರಿ ಲ್ಲಿ ಅವರು ಮಾವನ ಮನೆ ಸೇರಿದರು. ಅವರ ಅವಸ್ಥೆಯನ್ನು ಕಂಡು ರತ್ನಾವಲಿ ಹೇಳಿದ ಮಾತು ವನ್ನು ಪ್ರಾರಂಭದ ಶ್ಲೋಕಗಳಲ್ಲಿ ಅಳವಡಿಸಲಾ ದೆ.

ಅಸ್ಥಿ ಚರ್ಮ ಮಾಂಸದಿಂದ ಕೂಡಿದ ಈ ದೇಹದ ಮೇಲೆ ಇಷ್ಟೊಂದು ಮೋಹ ಪಡಲು ಶ್ರೀರಾಮನ ಭೀತಿಯಾದರೂ ಬೇಡವೇ ಧಿಕ್ಕಾರ ಧಿಕ್ಕಾರ ನಿಮ್ಮ ಜನ್ಮಕ್ಕೆ ಎಂದು ಹೇಳಿದಳಂತೆ. ಆಗ ಕವಿಗಳ ಮನಸ್ಸು ಪರಿವರ್ತನಗೊಳ್ಳುವಂತಾ ಯಿತು. ಮುಂದೆ ರಾಮಚರಿತ ಮಾನಸ ಗ್ರಂಥವ ರ್ತೃ ತುಲಸೀದಾಸರೆಂದೇ ಅವರು ಲೋಕ ಪ್ರಸಿದ್ಧಿ ಯನ್ನು ಹೊಂದಿದರು.

ಸಂತರ ಜೀವನದ ಈ ಘಟನೆ ದೇಶ ಕಾಲಾ ತೀತವೆಂದೆನಿಸುವುದು. ನವಕೋಟಿ ನಾರಾ ಯಣರೆಂದೇ ಖ್ಯಾತರಾಗಿದ್ದ ಶ್ರೀನಿವಾಸ ನಾಯ ಕ ಜೀವನವನ್ನು ಪರಿವರ್ತನೆಗೊಳಿಸಿದ ತಮ್ಮ ಪತ್ನಿಯ ಉಪಕಾರವನ್ನು ಕುರಿತು ಪುರಂಧರದಾ ಸ ಹೆಂಡತಿ ಸಂತತಿ ಸಾವಿರವಾಗಲಿ, ದಂಡಿಗೆ ಬೆತ್ತ ಹಿಡಿಸಿದಳಯ್ಯ ಎಂದು ಸಹಧರ್ಮಿಣಿಯನ್ನು ಭಕ್ತ ಮನದಿಂದ ಕೊಂಡಾಡಿ ಹಾಡಿದರು.

ರತ್ನಾವಲಿಯ ಶಬ್ದಗಳಿಂದ ಬ್ರಹ್ಮಜ್ಞಾನ ಪ್ರಾಪ್ತಿ ಯಾದಂತೆನಿಸಿದ ತುಲಸೀದಾಸರು ತಮ್ಮ ವಿಷಯಾ ದಿಗಳನ್ನೆಲ್ಲ ತೊರೆದು ರಾಮಭಕ್ತ ಪರಾಯಣರಾಗಿ ಸಂಸಾರವನ್ನು ತ್ಯಾಗ ಮಾಡಿ ಶ್ರೀರಾಮನಾಮ ಧ್ಯಾನ ಮಾಡುತ್ತಾ ಹೊರಟುಬಿಟ್ಟರು. ಆ ಮಾತನ್ನೇ ಈ ಕೆಳಗಿನ ಪದ್ಯದಿಂದ ತಿಳಿಯಬಹುದು.

ಕರೇ ಏಕ ರಘುನಾಥ ಸಂಗ
ಬಾಂಧ ಜಟಾ ಸಿರಕೇಸ
ಹಮತೋ ಚಾಖಾ ಪ್ರೇಮ
ರಸ ಪತನೀಕೇ ಉಪದೇಶ

ಮನೆಗೆ ಬೆನ್ನು ತೋರಿಸಿ ದಾಸರು ಪ್ರಯಾಗ ಕ್ಷೇತ್ರಕ್ಕೆ ಬಂದು ಕೆಲವು ಕಾಲ ವೇಣೀ ಮಾಧ ವನ ಸನ್ನಿಧಾನದಲ್ಲಿದ್ದು ತೀರ್ಥಾಟನ ನಿಮಿತ್ತದಿಂದ ಕಾಶಿಗೆ ಬಂದು ವಿಶ್ವನಾಥನ ದರ್ಶನ ಪಡೆದು ಕೊಂಡು ಮಾನಸ ಸರೋವರದತ್ತ ಪ್ರಯಾಣವ ನ್ನಾರಂಭಿಸಿದಾಗ ಮಾರ್ಗ ಮಧ್ಯದಲ್ಲಿ ಅವರಿಗೆ ಕಾಕ ಭುಶುಂಡಿ ಋಷಿಗಳ ದರ್ಶನವಾಯಿತೆಂದು ಹೇಳಿ ದ್ದಾರೆ. ಅಲ್ಲಿಂದ ಪುನಃ ಕಾಶೀ ಕ್ಷೇತ್ರಕ್ಕೆ ಮರಳಿ ಬಂದು ಸಂಕಟಮೋಚನ ಘಾಟ ಎಂಬ ಸ್ಥಳದಲ್ಲಿ ವಾಸ ಮಾಡತೊಡಗಿದರು. ಪ್ರತಿನಿತ್ಯ ರಾಮಕಥಾ ಪ್ರವಚನ ಮಾಡುತ್ತಿದ್ದರು.

# ರಾಮದರ್ಶನ

ಆದ್ಯ ರಾಮಾಚಾರ್ಯ

ಒಂದು ದಿನ ಅವರ ಮನದಲ್ಲಿ ಶ್ರೀರಾಮರ ದರ್ಶನ ಪಡೆಯುವ ಹಂಬಲ ಬೆಳೆಯಿತು. ಈ ಕೆಲಸವಾಗಬೇಕಾದಲ್ಲಿ ನೀನು ಆಂಜನೇಯ ಅನು ಗ್ರಹವನ್ನುಸಂಪಾದಿಸು ಎಂಬ ಆದೇಶವು ಸ್ವಪ್ನದಲ್ಲಿ ಲಭಿಸಿತು. ಚಿತ್ರಕೂಟಕ್ಕೆ ಹೋದಲ್ಲಿ ನಿನ್ನ ಈ ಮನೋರಥವು ಪೂರೈಸುವುದೆಂಬ ಸೂಚನೆಯೂ ಲಭಿಸಿತು.

ತುಲಸೀದಾಸರು ಅಂದೇ ತಮ್ಮ ಪ್ರಯಾಣವನ್ನಾ ರಂಭಿಸಿದರು. ಚಿತ್ರಕೂಟದಲ್ಲಿರುವ ರಾಮಘಾಟ ಎಂಬ ಸ್ಥಳದಲ್ಲಿ ಬಿಡಾರ ಮಾಡಿದರು. ಶ್ರೀರಾಮ ನಾಮ ಸ್ಮರಣೆಯೊಂದಿಗೆ ಪ್ರತಿದಿನವೂ ಗ್ರಾಮ ಪ್ರದ ಕ್ಷಿಣೆಯನ್ನಾರಂಭಿಸಿದರು. ಹೀಗೆ ಭಜನೆ ಮಾಡುತ್ತಾ ಹೊರಟಾಗ ಅತ್ಯಂತ ಸ್ಫುರದ್ರೂಪಿಗಳಾದ ತರುಣ ರಿಬ್ಬರು ಕುದುರೆ ಸವಾರಿ ಮಾಡಿಕೊಂಡು ಹೋಗು ತ್ತಿರುವುದನ್ನು ಕಂಡರು. ಲೋಕೋತ್ತರ ಸೌಂದ ರ್ಯದಿಂದ ಕೂಡಿದ ಆ ತರುಣರೇ ರಾಮ ಲಕ್ಷ್ಮಣ ರೆಂಬುದು ಅವರ ಗಮನಕ್ಕೆ ಬರದೇ ಹೋಯಿತು. ರೂಪಕ್ಕಿಂತ ನಾಮವೇ ಹೆಚ್ಚಿನದೆಂಬ ನಂಬಿಕೆ ಅವ ರದಾಗಿತ್ತು. ಇದೇ ಮಾತನ್ನು ಅವರು "ರೂಪ ವಿಶೇಷ ನಾಮ ಬಿನು ಜಾನೇ ಕರತಲಗತ ನ ಪಹ ಚಾನೆ" ಎಂಬ ಮಾತಿನಲ್ಲಿ ಹೇಳಿದ್ದಾರೆ. ಆದರೂ ಸಹ ಶ್ರೀರಾಮ ದರ್ಶನದ ಅಪೇಕ್ಷೆ ಕೊಂಚವೂ ಕಡಿ ಮೆಯಾಗಲಿಲ್ಲ. ಪುನಃ ಮತ್ತಷ್ಟು ಏಕಾಗ್ರ ಮನದಿಂದ ಹನುಮಂತನಿಗೆ ಶರಣು ಹೋದರು. "ಅಯ್ಯಾ ಆ ಕುದುರೆ ಸವಾರರನ್ನು ನೋಡಿಯಾದರೂ ನೀನು ಪ್ರಭುವನ್ನು ಗುರುತಿಸಬಾರದೇ?" ಎಂದು ಕೇಳಿ ದಾಗ "ಮಾರುತಿರಾಯಾ ಮಂದಮತಿಗೆ ಅಂಥ ಚುರುಕು ಬುದ್ಧಿ ಕೊಡಬೇಕಾದವನೂ ನೀನೇ ಅಲ್ಲವೇ ? ದಯಮಾಡಿ ನನ್ನ ಅಪರಾಧವನ್ನು ಕ್ಷಮಿಸು. ಇನ್ನೊಂದು ಸಲ ಪ್ರಭುವಿನ ದರ್ಶನ ಮಾಡಿಸು" ಎಂದು ಕೇಳಿಕೊಂಡರು. ಅವರ ಆರ್ತ ತೆಯನ್ನು ಕಂಡು ಹನುಮಂತನ ಮನ ಕರಗಿತು. "ಆಗಲಿ ಪುನಃ ಇನ್ನೊಂದು ಸಲ ನಿನಗಾಗಿ ನನ್ನ ಸ್ವಾಮಿಯನ್ನು ಕೇಳಿಕೊಳ್ಳುವೆ" ಎಂದು ಸಮಾಧಾನ ಮಾಡಿದನು.

ವಿಕ್ರಮ ಸಂವತ್ಸರ ೧೬೦೭ ಮೌನಿ ಅಮಾವಾ ಸ್ಯೆಯ ಶುಭ ಗಳಿಗೆಯಲ್ಲಿ ಬಾಲರೂಪಧಾರಿಗ ಳಾದ ಪ್ರಭುಗಳು ತುಲಸೀದಾಸರ ಮುಂದೆ ಬಂದು ನಿಂತರು. ಆ ಸಮಯದಲ್ಲಿ ದಾಸರು ಗಂಧ ತೇಯುವುದರಲ್ಲಿ ತಲ್ಲೀನರಾಗಿದ್ದರು. ಆಗ ಮಾತ್ರ ಹನುಮಂತನಿಗೆ ತಡೆಯುವದಾಗಲಿಲ್ಲ. ತಕ್ಷಣವೇ ಆತನು ಗಿಳಿಯ ರೂಪವನ್ನು ತಾಳಿ ಅವರು ಯಾವ



## ಆರ್ಜಿತ ಸೇವೆಗಳ ದರಗಳಲ್ಲಿ ಬದಲಾವಣೆ

ತಿ.ತಿ.ದೇ. ಗಳ ವಿಶೇಷ ಪ್ರಾಧಿಕಾರ ತಮ್ಮ ತೀರ್ಮಾನದ ಮೂಲಕ ಆರ್ಜಿತ ಸೇವೆಗಳಲ್ಲಿ ಹಲವು ಬದಲಾವಣೆಗಳನ್ನುಂಟುಮಾಡಿದ್ದು, ಈ ಪರಿವರ್ತನೆಗಳು 1-5-95 ರಿಂದ ಜಾರಿಗೆ ಬರುವುವು ಭಕ್ತರು ಗಮನಿಸಬೇಕಾಗಿ ವಿನಂತಿ.

1. ಕಲ್ಯಾಣೋತ್ಸವ : ಶುಲ್ಕ ರೂ. 2,500/- ಪ್ರವೇಶಾವಕಾಶ 5 ಮಂದಿಗೆ. ಪ್ರಸಾದ : 5 ದೊಡ್ಡ ಲಾಡು, 5 ವಡೆ, 5 ದೋಸೆ, 5 ಅಪ್ಪ, ಸಕ್ಕರೆ ಪೊಂಗಲು, ಪೊಂಗಲು, ಪುಳಿಯೋಗರೆ, ದಧ್ಯೋದನ (ಪ್ರತಿಯೊಂದೂ ಹದಿನಾರನೇ ಒಂದು ಸೋಲ) ವಸ್ತ್ರ ಬಹುಮಾನ -- ಪರಿವರ್ತನೆಯಿಲ್ಲ.
2. ಪ್ರತ್ಯೇಕ ಕಲ್ಯಾಣೋತ್ಸವ : ಶುಲ್ಕ -- ರೂ. 750/- ಪ್ರವೇಶ -- ಇಬ್ಬರಿಗೆ ಮಾತ್ರ, ವಸ್ತ್ರಬಹುಮಾನ -- ಪರಿವರ್ತನೆಯಿಲ್ಲ.
3. ಸಹಸ್ರ ಕಲಶಾಭಿಷೇಕ : ಶುಲ್ಕ ರೂ. 5,000/- ಪ್ರಸಾದ ವಸ್ತ್ರ ಬಹುಮಾನದಲ್ಲಿ ಪರಿವರ್ತನೆಯಿಲ್ಲ.
4. ತಿರುಪ್ಪಾವಡಾ : ಶುಲ್ಕ ರೂ. 5,000/- ಪ್ರಸಾದ, ವಸ್ತ್ರ ಬಹುಮಾನದಲ್ಲಿ ಬದಲಾವಣೆಯಿಲ್ಲ.
5. ಪುಷ್ಪಯಾಗ : ಶುಲ್ಕ ರೂ. 3,500/- ಪ್ರಸಾದ -- 1 ದೊಡ್ಡ ಲಾಡು, 1 ವಡೆ. ಬಂಗಾರದ ಡಾಲರ್ ಬಹುಮಾನ ಇರುವುದಿಲ್ಲ.
6. ಪವಿತ್ರೋತ್ಸವ : ಶುಲ್ಕ ರೂ. 7,500/- ಪ್ರಸಾದ ವಸ್ತ್ರ ಬಹುಮಾನದಲ್ಲಿ ಪರಿವರ್ತನೆಯಿಲ್ಲ.

ಇದರಂತೆಯೇ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲಿನ ತೋಮಾಲೆ, ಅರ್ಚನೆ, ಏಕಾಂತ ಸೇವೆಗಳಲ್ಲಿನ ಟಿಕೆಟ್ ದರವನ್ನು 4 ರೂಗಳಿಂದ 10 ರೂ.ಗಳಿಗೆ ಏರಿಸಲಾಗಿದೆ -- ಈ ದರಗಳು ಕೂಡಲೇ ಜಾರಿಗೆ ಬಂದಿವೆ.

ಭಕ್ತರು ಸಹಕರಿಸಬೇಕಾಗಿ ವಿನಂತಿ.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

### ತಿರುಚಾನೂರು

### ಆರ್ಜಿತ ತಿರುಪ್ಪಾವಡಾ ಸೇವೆ

ತಿರುಚಾನೂರಿನ ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ಆರ್ಜಿತ ತಿರುಪ್ಪಾವಡಾ ಸೇವೆಯನ್ನು ಆರಂಭಿಸಲಾಗಿದೆ. ಯಾತ್ರಿಕಭಕ್ತರು ನಿಗಧಿ ಪಡಿಸಿದ ಶುಲ್ಕವನ್ನು ನೀಡಿ ಈ ಸೇವೆಯನ್ನು ಮಾಡಿಸಬಹುದು.

ಪ್ರತಿ ಗುರುವಾರ ಬೆಳಗ್ಗೆ ೧೧ ಗಂಟೆಯಿಂದ ೧೨ ಗಂಟೆಯೊಳಗೆ ಈ ಸೇವೆಯನ್ನು ನಡೆಸಲಾಗುವುದು. ಶುಲ್ಕ ರೂ.೩೦೦೦/- ಮಾತ್ರದಿಂದ ಈ ಸೇವೆಯನ್ನು ನಡೆಸಬಹುದು.

ವಿವರಗಳಿಗಾಗಿ ಕೂಡಲೇ ಬರೆಯಿರಿ:

**ದಿ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್**

ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

ತಿರುಚಾನೂರು.

ತಿ. ತಿ. ದೇ. ತಿರುಪತಿ.

ಸ್ಥಳದಲ್ಲಿ ಕುಳಿತು ಗಂಧ ತೇಯುತ್ತಿದ್ದರೋ ಅದೇ ಸ್ಥಳದಲ್ಲಿರುವ ಮರದ ಮೇಲೆ ಕುಳಿತು--

"ಚಿತ್ರಕೂಟ ತೇ ಘಾಟಪರ
ಭಯಿ ಸಂತಗತೀ ಭೀರ
ತುಲಸೀದಾಸ ಚಂದನ
ಘೀಸೇ ತಿಲಕದೇತ ರಘುವೀರ

ಎಂಬ ದೋಹಾ (ದ್ವಿಪದಿಯನ್ನು) ನುಡಿದರು. ಆಗ ತುಲಸೀದಾಸರಿಗೆ ತಮ್ಮ ಪ್ರಭು ಸಮ್ಮುಖದಲ್ಲಿ ಬಂದು ನಿಂತಿರುವುದರ ಅರಿವಾಯಿತು. ಆತನ ಲೋಕೋತ್ತರ ಅಪ್ರಾಕೃತಿಕ ರೂಪಸೌಂದರ್ಯವನ್ನು ನೋಡುವುದರಲ್ಲಿ ತಮ್ಮನ್ನು ತಾವೇ ಮರೆತುಬಿಟ್ಟರು. ಭಕ್ತನ ಅಂತರ್ಭಾವವನ್ನರಿತ ಶ್ರೀರಾಮಚಂದ್ರನು ಅವರು ತೇದಿಟ್ಟ ಗಂಧವನ್ನು ತಾನೇ ಕೈಗೆತ್ತಿಕೊಂಡು ಮೊದಲು ತನ್ನ ಹಣೆಗೆ ಅಂಟಿಸಿಕೊಂಡ ನಂತರ ತನ್ನ ಸ್ವಹಸ್ತದಿಂದಲೇ ದಾಸರಿಗೂ ಸಹ ಶ್ರೀಗಂಧದ ಲೇಪನ ಮಾಡಿದನು. ಆ ದಿವ್ಯ ಪುರುಷನ ಸ್ಪರ್ಶವಾದುದೇ ತಡ ದಾಸರಿಗೆ ಬಾಹ್ಯ ಜಗತ್ತಿನ ಪ್ರಜ್ಞೆ ಬರುವಂತಾಯಿತು. ಅಷ್ಟರಲ್ಲಿ ಬಾಲರೂಪಿ ಶ್ರೀರಾಮನು ಕಣ್ಮರೆಯಾಗಿಬಿಟ್ಟಿದ್ದ. ಶ್ರೀರಾಮ ದರ್ಶನ ಮಾತ್ರದಿಂದ ಅವರ ನರನಾಡಿಗಳಲ್ಲಿ ಹೊಸ ಚೈತನ್ಯದ ಪ್ರವಾಹವೇ ಹರಿಯತೊಡಗಿತು. ರಾಮ ಭಕ್ತನಾದ ಹನುಮಂತನ ಅಜ್ಞಾನುಸಾರವಾಗಿ ವಿಕ್ರಮ ಸಂವತ್ಸರ ೧೬೩೧ ರಂದು ವರು ಪುನಃ ಅಯೋಧ್ಯೆಯತ್ತ ಪಯಣವನ್ನಾರಂಭಿಸಿದರು. ಆಗ ಕ್ಷೇತ್ರ ರಾಜನೆಂದೇ ಖ್ಯಾತಿ ಗಳಿಸಿ ಪ್ರಯಾಗದಲ್ಲಿ ಮಾಘ ಮೇಳವು ಕೂಡಿತ್ತು. ಆ ಮೇಳದಲ್ಲಿ ಅವರಿಗೆ ಭರದ್ವಾಜ ಹಾಗೂ ಯಾಜ್ಞವಲ್ಕ್ಯ ಮುನಿಗಳ ದರ್ಶನವು ತಮಗೆ ಲಭಿಸುವಂತಾಯಿತೆಂದು ಅವರು ತಮ್ಮ ಕಾವ್ಯದಲ್ಲಿ ಹೇಳಿಕೊಂಡಿದ್ದಾರೆ.

ಆಂಜನೇಯನ ಅನುಗ್ರಹದ ಬಲದಿಂದಲೇ ಅವರು ಪ್ರಭು ಶ್ರೀರಾಮಚಂದ್ರನ ಮಹಿಮಾತಿಶಯಗಳಿಂದ ಕೂಡಿದ ರಾಮಚರಿತ ಮಾನಸ ಎಂಬ ಬೃಹತ್ ಕಾವ್ಯವನ್ನು ರಚನೆ ಮಾಡಿದರು. ಈ ಕಾವ್ಯದಲ್ಲಿ ಮಾರ್ಗದರ್ಶನ ಮಾಡಿದ ಮಾರುತಿಯನ್ನು ಕೊಂಡಾಡಲು "ಹನುಮಾನ್ ಚಾಲಿಸಾ" ಎಂಬುವನ್ನು ತಪ್ಪದೇ ಪಠಿಸುತ್ತಿದ್ದರು.

ಹರಿ ಅನಂತ ಹರಿಕಥಾ ಅನಂತಾ ಎಂದು ಸಾರಿದ ಈ ಮಹಾನುಭಾವರು ತಮ್ಮ ಕೊನೆಯ ದಿನಗಳನ್ನು ಕಾಶಿಯಲ್ಲಿರುವ ಸಂಕಟ ಮೋಚನ ಘಾಟಿನಲ್ಲಿಯೇ ಕಳೆದರೆಂದು ಆ ದಿನವನ್ನು ವಿಕ್ರಮ ಸಂ. ೧೬೮೦ ಶ್ರಾವಣ ಕೃಷ್ಣ ತದಿಗೆ ಶನಿವಾರದಂದು ಶ್ರೀರಾಮ ಪಾದಾರವಿಂದ ಸೇರಿದರೆಂದು ಭಕ್ತರ ನಂಬಿಕೆಯು ಇದೆ.

# ವಿದುರ ನೀತಿ

## ಕೋಲಾರ್ ಕೃಷ್ಣ ಅಯ್ಯರ್

(ಉಪಶ್ರೀಯವರ ತೆಲುಗು ಭಾರತದ ಆಧಾರ)

ಮಹಾಭಾರತದಲ್ಲಿ ವಿದುರನು ಧೃತರಾಷ್ಟ್ರನಿಗೆ ಹೇಳಿದ ನೀತಿವಾಕ್ಯಗಳು :

ನಿರಂತರ ಯಾವುದೋ ಕೃಷಿಮಾಡುತ್ತಾ ಸಾತ್ವಿಕ ಭಾವದಿಂದ ಸಹನ ಶೀಲತೆಯಿಂದ, ನಿಶ್ಚಲ ಕರ್ಮ ದೀಕ್ಷೆಯಿಂದ ಇರುವವರು ಸತ್ವಲವನ್ನು ಹೊಂದುತ್ತಾರೆ. ಇವರನ್ನೇ ವಿದ್ವಾಂಸರಾಗಿ ಲೋಕವು ಸನ್ಮಾನಿಸುತ್ತದೆ.

ಶ್ರದ್ಧೆಯನ್ನು ಬಿಡದೆ, ಆಸಕ್ತಿಯನ್ನು ಬಿಡದೆ ಸತ್ಕರ್ಮವನ್ನಾಚರಿಸುವವರು ಪಂಡಿತರು.

ಅಪ್ರಸ್ತುತ ವಿಷಯಗಳಲ್ಲಿ ತಲೆದೂರಿಸಬಾರದು.

ಸಿಕ್ಕದ ವಸ್ತುಗಳಿಗಾಗಿ ಬಾಧೆ ಪಡಬಾರದು.

ಕಳೆದು ಹೋದವುಗಳಿಗಾಗಿ ವಿಚಾರಿಸಕೂಡದು

ಕಷ್ಟಗಳು ಬಂದಾಗ ಧೈರ್ಯವಾಗಿರದೇಕು.

ಆರಂಭಿಸಿದ ಕೆಲಸಗಳನ್ನು ಪೂರೈಸುವವರೆಗೂ ಬಿಡಬಾರದು. ಈ ಗುಣಗಳು ಇದ್ದವರು ವಿದ್ವಾಂಸರು. ಇವರು ಕೃತಜ್ಞತಾ ಸಿಂಧುಗಳಾಗಿ ಇವರ ಹೃದಯ ಗಂಭೀರ ಗಂಗಾನದೀ ಸದೃಶ. ಅಪಾಯ ವಿಲ್ಲದ ಉಪಾಯ ಇವರಿಗೆ ಗೊತ್ತು. ವ್ಯರ್ಥವಲ್ಲದ ವಾಕ್ಕು ಇವರ ಸೊತ್ತು.

ಮೂರ್ಖರ ಲಕ್ಷಣಗಳೆಂದರೆ :-- ಅಹಂಕಾರ ಇವರ ಮೊದಲನೆಯ ಲಕ್ಷಣ. ವಿದ್ಯಾಶೂನ್ಯರು, ವಿವೇಕಹೀನರು ಆದರೂ ತುಂಬಾ ಗರ್ವದಿಂದಿರುತ್ತಾರೆ.

ಯಾವ ಕಾರ್ಯ ಮಾಡದೆ ಫಲವನ್ನು ಮಾತ್ರ ಬೇಕೆನ್ನುತ್ತಾರೆ.

ಪರಮ ದರಿದ್ರದಿಂದಿದ್ದರೂ ಆಕಾಶಕ್ಕೆ ಏಣಿ ಹಾಕುತ್ತಾರೆ.

ಸ್ನೇಹಿತರೊಡನೆ ಅನ್ಯಾಯವಾಗಿ ಪ್ರವರ್ತಿಸುತ್ತಾರೆ.

ಬಲವಂತರೊಡನೆ ವೈರ ತಂದುಕೊಳ್ಳುತ್ತಾರೆ. ಶತ್ರುಗಳನ್ನು ಸ್ನೇಹಿತರೆಂದು ಭಾವಿಸುತ್ತಾರೆ.

ಆಹ್ವಾನಿಸದೆ ಇದ್ದರೂ ಬರುತ್ತಾರೆ.

ಕೇಳದೇನೆ ಸಲಹೆಗಳು ಸುರಿಸುತ್ತಾರೆ.

ಯಾವಾಗಲು ಇತರರಲ್ಲಿ ದೋಷಗಳನ್ನೇ ನೋಡುತ್ತಾರೆ.

ಕೃತಘ್ನರಲ್ಲಿ ವಿಶ್ವಾಸ ತೋರಿಸುತ್ತಾರೆ.

ಅಕಾರಣವಾಗಿ ಕ್ರೋಧವನ್ನು ಪ್ರದರ್ಶಿಸುತ್ತಾರೆ.

ಇವರೆಲ್ಲರೂ ಮೂರ್ಖರೇ.

ತನ್ನ ಬುದ್ಧಿಯಿಂದ ಕರ್ತವ್ಯಾಕರ್ತವ್ಯಗಳನ್ನು ಗ್ರಹಿಸಿ, ಶತ್ರು ಮಿತ್ರ ಉದಾಸೀನರನ್ನು ಕುರಿತು ಸಾಮ, ದಾನ, ಭೇದ, ದಂಡೋಪಾಯಗಳು ಸಕ್ರಮವಾಗಿ ಅನುಸರಿಸಿ, ಇಂದ್ರಿಯ ಪಂಚಕವನ್ನು ಸ್ವಾಧೀನದಲ್ಲಿಟ್ಟುಕೊಂಡು, ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯ ಇಗಳನ್ನು ಗ್ರಹಿಸಿ, ಮದ್ಯಪಾನ, ಮೃಗಯಾವಿನೋದ, ಪರಸ್ತ್ರೀಗಮನ, ಪರುಷ ಭಾಷಣ, ಕಟುಸ್ವಭಾವ, ಕಠಿನ ದಂಡನ ದ್ಯೂತ ಕ್ರೀಡೆಗಳನ್ನು ವಿಸರ್ಜಿಸಿದವರು ಸುಖವಾಗಿರುತ್ತಾರೆ.

ಒಂಟಿ ಯಾಗಿ ಭುಜಿಸುವುದು, ಏಕಾಕಿಯಾಗಿ ಪ್ರಯಾಣಮಾಡುವುದು, ವಿಷಯ ಸಮಸ್ಯೆಗಳನ್ನು ತನ್ನಿಷ್ಟಕ್ಕೆ ತಾನೇ ಪರಿಷ್ಕರಿಸುವುದು ಕೂಡದು. ಎಲ್ಲರೂ ನಿದ್ರಿಸುತ್ತಿರುವಾಗ ನಾವು ಒಬ್ಬರೇ ಎಚ್ಚರವಾಗಿರುವುದು ಹಾನಿಕರ.

ಮೂರ್ಖರು ಕ್ಷಮಾಶೀಲರನ್ನು ಅಸಮರ್ಥರೆಂದು ಭಾವಿಸುತ್ತಾರೆ. ಸಮರ್ಥರಿಗೆ ಕ್ಷಮಯೇ ಭೂಷಣ.

ಕರ್ಮ ಆಚರಿಸದ ಸಂಸಾರಿ, ಕರ್ಮಕ್ಕೆ ಇಳಿದ ಸನ್ಯಾಸಿ ಅಧಮರು.

ಶತ್ರುಗಳನ್ನು ಲಕ್ಷ್ಯಮಾಡದ ಚಕ್ರವರ್ತಿ, ದೇಶಗಳು ಸಂಚರಿಸದ ವಿದ್ವಾಂಸ, ಇವರಿಬ್ಬರು ವ್ಯರ್ಥ ಜೀವಿಗಳೇ.

ನಾವು ಸಂಪಾದಿಸಿದ ಧನವನ್ನು ಪಾತ್ರರಿಗೆ ದಾನ ಮಾಡದಿದ್ದರೂ, ಅಪಾತ್ರರಿಗೆ ದಾನಮಾಡಿದರೂ ನಿಷ್ಪ್ರಯೋಜನವೇ ಆಗುತ್ತೆ.

ಆಸ್ತಿಪರರು ದಾನಧರ್ಮಾದಿಗಳು ಮಾಡದೇಕು.

ಪರಧನಾಪಹರಣ, ಪರನಾರೀ ಸಾಂಗತ್ಯ ಸುಹೃಜ್ಜನ ಪರಿತ್ಯಾಗ ಎನ್ನುವ ದೋಷಗಳು ನಮ್ಮ ಧರ್ಮ, ಆಯುರ್ದಾಯ, ಕೀರ್ತಿಗಳನ್ನು ನಾಶಮಾಡುತ್ತವೆ.

ಕಾಮ, ಕ್ರೋಧ, ಲೋಭಗಳು ನರಕಕ್ಕೆ ತೆರದ ದ್ವಾರಗಳು.

ಕುಟುಂಬದಲ್ಲಿ ವೃದ್ಧರನ್ನು ನಾವು ಆದರಿಸಿ ಪೋಷಿಸದೇಕು.

ದೈವಸಂಕಲ್ಪ, ವಿದ್ವಾಂಸರ ಸನ್ನಿಧಿಯಲ್ಲಿ ವಿನಯ ಪಾಪಕಾರ್ಯವಿರಕ್ತಿ, ಧೀಮಂತರಶಕ್ತಿ ಇವುಗಳು ಮಾನವರ ಭಯಗಳನ್ನು ದೂರಮಾಡುತ್ತವೆ.

ತಾಯಿ, ತಂದೆ, ಗುರುವು ಆತ್ಮ ಅಗ್ನಿ ಇವುಗಳನ್ನು ಪಂಚಾಗ್ನಿಗಳಾಗಿ ಸೇವಿಸದೇಕು.

ಪ್ರಜಾ ರಕ್ಷಣೆ ಮಾಡಲಾಗದ ಪ್ರಭುವು
ನಿರಂತರ ಪರುಷದಿಂದ ಭಾಷಿಸುವ ಪತ್ನಿ
ಶಿಷ್ಯರಿಗೆ ವಿದ್ಯೆ ಕಲಿಸಲಾಗದ ಗುರುವು
ಗ್ರಾಮ ಮಧ್ಯದಲ್ಲಿರದೇಕೆನ್ನುವ ಗೋಪಾಲಕ
ವನವಾಸದ ಮೇಲೆ ಆಸಕ್ತಿ ಇರುವ ಕ್ಷೌರಕ

--ಇವರು ಯಾವದಕ್ಕು ಉಪಯೋಗವಿಲ್ಲದವರು. ಇವರುಗಳನ್ನು ಎಷ್ಟು ತ್ವರಿತವಾಗಿ ಬಿಟ್ಟುಕೊಟ್ಟರೆ ಅಷ್ಟು ಒಳ್ಳೆಯದು.

ಆರೋಗ್ಯ ಸಂಪದ, ಅನುಕೂಲವತಿಯಾದ ಅರ್ಧಾಂಗಿ, ಹೇಳಿದ ಮಾತು ಕೇಳುವ ಸಂತಾನ, ಜೀವನಕ್ಕೆ ಉಪಯೋಗಪಡುವ ವಿದ್ಯೆ, ಒಳ್ಳೇ ಸಲಹೆಗಳು ಕೊಡುವ ಸ್ನೇಹಿತನು, ಇದ್ದವರಿಗಿಂತಲು ಸುಖವಾಗಿ ಬಾಳುವವನು ಇಲ್ಲ.

ಸಂರಕ್ಷಣೆ ಇಲ್ಲದ ಗೋವು, ವ್ಯವಸಾಯ, ವಿದ್ಯೆ ಸ್ತ್ರೀಯರು ಹಾಳಾಗುತ್ತಾರೆ.

ವಿದ್ಯೆ ಕಲಿತ ನಂತರ ಶಿಷ್ಯ ಗುರುವನ್ನು,
ವಿವಾಹ ವಾದಮೇಲೆ ಮಗ ತಾಯಿಯನ್ನು,
ಕಾಮ ಭೋಗ ಪೂರ್ತಿಯಾದ ಮೇಲೆ ಪುರುಷ ಸ್ತ್ರೀಯನ್ನು,
ನದೀ ಪ್ರವಾಹವನ್ನು ದಾಟಿದಮೇಲೆ
ನಾವೆಯನ್ನು,
ಕೆಲಸ ಪೂರ್ತಿಯಾದ ನಂತರ
ಸಹಾಯ ಮಾಡಿದವರನ್ನು,

ರೋಗ ಗುಣವಾದಮೇಲೆ ವೈದ್ಯನನ್ನು ಕೃತಘ್ನರು ಮರೆತುಹೋಗುತ್ತಾರೆ.

ಸ್ನೇಹಿತರಲ್ಲಿ ಭೇಟಿ, ಧನಪ್ರಾಪ್ತಿ, ಪುತ್ರಪರಿಷ್ವಂಗ, ಸುಖಸಂಭೋಗ, ಸಹಚರರಲ್ಲಿ ಕೀರ್ತಿ ಪಡೆಯುವುದು, ಪ್ರಿಯ ಸಂಭಾಷಣೆ, ಮಹಾಸಭೆಯಲ್ಲಿ ಸನ್ಮಾನ, ಆಶಿಸಿದ್ದು ನೆರವೇರುವುದು -- ಇವು ಯಾರಿಗಾದರೂ ಸಂತೋಷವನ್ನುಂಟುಮಾಡುತ್ತವೆ.

ಈರ್ಷ್ಯೆ, ದ್ವೇಷ, ಅಸಂತೃಪ್ತಿ, ಕ್ರೋಧ, ನಿತ್ಯಶಂಕೆ, ಪರಭಾಗ್ಯೋಪಜೀವನ -- ಇವಕ್ಕಿಂತಲು ದುಃಖ ದಾಯಕಗಳಿಲ್ಲ.

ಸ್ನೇಹ, ವಿವಾಹ, ವ್ಯವಹಾರ -- ಇವುಗಳನ್ನು ಸಮಾನರಲ್ಲೇ ನಡೆಸಿಕೊಳ್ಳದೇಕು.

ಮಿತವಾಗಿ ಭುಜಿಸದೇಕು.

ಆಶ್ರಿತರನ್ನು ಆದರಿಸದೇಕು.

(18 ನೇ ಪುಟ ನೋಡಿ)

ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
# ತಿರುಚಾನೂರು.

## ವಾರ್ಷಿಕ ಪ್ಲವೋತ್ಸವ

### 9--6--95 ರಿಂದ 13--6--95 ವರೆಗೆ

| | | |
|---|---|---|
| 9--6--95 | ಶುಕ್ರವಾರ | ಶ್ರೀಕೃಷ್ಣಸ್ವಾಮಿ ತೆಪ್ಪೋತ್ಸವ. |
| 10--6--95 | ಶನಿವಾರ | ಶ್ರೀ ಸುಂದರ ರಾಜಸ್ವಾಮಿ ತೆಪ್ಪೋತ್ಸವ. |
| 11--6--95 | ಭಾನುವಾರ | ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ. |
| 12--6--95 | ಸೋಮವಾರ | ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ. |
| 13--6--95 | ಮಂಗಳವಾರ | ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ. |

ಸೂಚನೆ : ಜೇಷ್ಠ ಮಾಸದ ಪೂರ್ಣಿಮೆಯ ಆಚೀಚಿನ ದಿನಗಳಲ್ಲಿ ತಿರುಚಾನೂರಿನ ಪದ್ಮಸರೋವರದಲ್ಲಿ ನಡೆಯುವ ಪ್ಲವೋತ್ಸವ ಪುಷ್ಪಾಲಂಕಾರಗಳು ವಿದ್ಯುದ್ದೀಪಗಳು ವೇದ ಮಂತ್ರ ಘೋಷಗಳ ನಡುವೆ ನಯನಾನಂದಕರವಾಗಿ ಕರ್ಣಾನಂದಕರವಾಗಿರುವುದು. ತಿರುಚಾನೂರು ತಿರುಪತಿಯಿಂದ ಆರು ಕಿ.ಮೀ. ದೂರದಲ್ಲಿದ್ದು ಒಂದರ ಹಿಂದೆ ಒಂದರಂತೆ ಬಸ್ ಸೌಕರ್ಯವಿರುವುದು.

ತಾವೂ ಬನ್ನಿ. ತಿ. ತಿ. ದೇ. ತಮ್ಮವರನ್ನೂ ಕರೆತನ್ನಿ.

ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ಅಪ್ಪಲಾಯಗುಂಟ.

## ವಾರ್ಷಿಕ ಬ್ರಹ್ಮೋತ್ಸವಗಳು

### 7--6--95 ರಿಂದ 16--6--95 ವರೆಗೆ

| | | |
|---|---|---|
| 8--6--95 | ಗುರುವಾರ | ಧ್ವಜಾರೋಹಣ. |
| 12--6--95 | ಸೋಮವಾರ | ಗರುಡವಾಹನ. |
| 15--6--95 | ಗುರುವಾರ | ರಥೋತ್ಸವ. |
| 16--6--95 | ಶುಕ್ರವಾರ | ಧ್ವಜಾವರೋಹಣ. |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಾಹನ ಸೇವೆಗಳು ಇರುತ್ತವೆ. ಸಾಂಸ್ಕೃತಿಕ ಕಾರ್ಯಕ್ರಮಗಳೂ ಉಂಟು. ಅಪ್ಪಲಾಯಗುಂಟ ಪುತ್ತೂರು ಚಿತ್ತೂರು ಮಾರ್ಗದಲ್ಲಿ ತಿರುಪತಿಯಿಂದ 47 ಕಿ.ಮಿ. ದೂರದಲ್ಲಿದೆ.

ತಾವೂ ಬನ್ನಿ. ತಿ. ತಿ. ದೇ. ತಮ್ಮವರನ್ನೂ ಕರೆತನ್ನಿ.

# ನಂದವರಂ

---ಡಿ. ರಾಮಕೃಷ್ಣರಾವ್.

-- ಚಿತ್ರಗಳು -- ಆರ್. ಶ್ರೀರಾಮುಲು.

ನಂದವರಂ ನಂದವರೀಕರ ಪವಿತ್ರ ಯಾತ್ರಾ ಸ್ಥಳ. ಇದು ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯ ನಂದ್ಯಾಲ ತಾಲ್ಲೂಕು, ಬನಗಾನ ಹಳ್ಳಿ ಹೋಬಳಿಯಲ್ಲಿದೆ. ಮೊದಲಿಗೆ ನಂದವರಂಗೆ ನಂದವರಪುರಂ ಎಂದು ಹೆಸರಿದ್ದಂತೆ ತಿಳಿದುಬರುತ್ತೆ. ಇದು ನಂದನ ಚಕ್ರವರ್ತಿ ಎಂದು ಹೆಸರಾದಂತ ನಂದರಾಜನ ರಾಜಧಾನಿಯಾಗಿತ್ತು. ನಂದವರಂ ಗ್ರಾಮ ಬನಗಾನಪಲ್ಲಿಯಿಂದ ಉತ್ತರಕ್ಕೆ ೧೦ ಕಿ.ಮಿ. ದೂರದಲ್ಲಿದೆ. ಶ್ರೀ ಚೌಡೇಶ್ವರಿ ದೇವಾಲಯದಿಂದ ಈ ಗ್ರಾಮಕ್ಕೆ ಪ್ರಾಮುಖ್ಯ ಬಂದಿದೆ.

ನಂದವರಂಗೆ ಸುತ್ತಲೂ ನಂದವರಂ ಕೋಟೆ ಇದ್ದಂತೆ ಚಾರಿತ್ರಿಕವಾಗಿ ನಂಬಲಾಗಿದೆ. ಈಗಲೂ ಸಹ ಗತಕಾಲದ ಕೋಟೆ, ಕೊತ್ತಲಗಳನ್ನು ಕಾಣಬಹುದು. ನಂದವರಪುರಂ ೧೦ ಚ. ಮೈ. ವಿಸ್ತಾರ ೩೦೧ ದೇವಾಲಯಗಳು ಮತ್ತು ೩೦೧ ಬ್ರಾಹ್ಮಣಕುಟುಂಬಗಳನ್ನೊಳಗೊಂಡು ರಾಜದಾನಿಯಾಗಿ ಮೆರದ ನಗರಕ್ಕೆ ಅಪ್ಪಲಪುರಂ, ಸಂಕಟಪುರಂ, ಪಂಡ್ಲಪುರಂ, ವೆಂಕಟಪುರಂ, ತಾಟಕಪುರಂ, ತಿಮ್ಮಾಪುರಂ, ಅಮ್ಮನಾಗಪುರಂ, ವಿಠ್ಠಲಪುರಂ ಎಂಬ ೮ ಪಟ್ಟಣಗಳು ಸೇರಿಕೊಂಡಿದ್ದಂತೆ ತಿಳಿದುಬರುತ್ತೆ.

ಚೌಡೇಶ್ವರಿ ಕಥೆಯಲ್ಲಿ ಕಾಶಿಯಿಂದ ಬಂದ ಬ್ರಾಹ್ಮಣರು ನಂದವರ ಅಗ್ರಹಾರವನ್ನು ನಂದನ ಚಕ್ರವರ್ತಿಯಿಂದ ಪಡೆದುಕೊಂಡುದನ್ನು ಮತ್ತು ಶ್ರೀ ಚೌಡೇಶ್ವರಿ ಮಾತೆ ಕಾಶಿಯಿಂದ ಬಂದು ನಂದವರಂನಲ್ಲಿ ನೆಲೆಸಿದುದನ್ನು ತಿಳಿಸಲಾಗಿದೆ. ಅಲ್ಲಿ ೫೦೦ ಕುಟುಂಬಗಳು ೧೩ ಗೋತ್ರಗಳವರು ತಮ್ಮ ತಮ್ಮಲ್ಲಿ ಈ ಅಗ್ರಹಾರವನ್ನು ಮತ್ತು ವೃತ್ತಿಗಳನ್ನು ವಿಭಾಗಿಸಿಕೊಂಡು ಶ್ರೀ ಚೌಡೇಶ್ವರಿ ಮಾತೆಯನ್ನು ತಮ್ಮ ಕುಲದೇವತೆಯನ್ನಾಗಿ ಮಾಡಿಕೊಂಡರು. ಕಾಶಿಯಲ್ಲಿ ನಂದನ ಚಕ್ರವರ್ತಿಯ ಸಂಕಷ್ಟ ಪರಿಸ್ಥಿತಿಯನ್ನು ತಮ್ಮ ಯೋಗಶಕ್ತಿಯಿಂದ ಪಾರು ಮಾಡಿದ ಬ್ರಾಹ್ಮಣರಿಗೆ ನಂದವರಂ ಅಗ್ರಹಾರವನ್ನು ಕೊಡುವುದಾಗಿ ಶ್ರೀ ಚೌಡೇಶ್ವರಿಮಾತೆಯ ಎದುರಿನಲ್ಲಿ ವಾಗ್ದಾನ ಮಾಡಿದಂತೆಯೂ, ಅದನ್ನು ನಂದನ ಚಕ್ರವರ್ತಿಯಿಂದ ಬ್ರಾಹ್ಮಣರಿಗೆ ಕೊಡಿಸಲೋಸುಗ ಕಾಶೀಕ್ಷೇತ್ರದಿಂದ ಚೌಡೇಶ್ವರಿ ಮಾತೆಯು ಬಂದಂತೆಯೂ ಶ್ರೀ ಚೌಡೇಶ್ವರಿ ಮಹಾತ್ಮೆಯಿಂದ ತಿಳಿದುಬರುತ್ತೆ. ಅದಾದನಂತರ ಆಕೆ ಬಾಹ್ಯ ಕಣ್ಣುಗಳಿಗೆ ಕಾಣದಂತೆ ಒಂದು ಗುಂಪಿನ ಬ್ರಾಹ್ಮಣರಿಗೆ ರಕ್ಷಕಳಾಗಿ ನಿಂತಂತೆ, ಆ ಬ್ರಾಹ್ಮಣರನ್ನು "ನಂದವರೀಕರೆಂದು" ಕರೆದಂತೆ ತಿಳಿದುಬರುತ್ತೆ. ನಂದವರ ಅಗ್ರಹಾರವನ್ನು ಪಡೆದು ಅಲ್ಲಿ ವೃತ್ತಿಯನ್ನು ಆರಂಭಿಸಿದ ಬ್ರಾಹ್ಮಣರೇ ನಂದವರ ಅಗ್ರಹಾರ ಗ್ರಹಿತರು, ನಂದವರೀಕರು. "ವೃತ್ತಿ" ಎಂಬುದು ಜೀವನಾಧಾರಕ್ಕಾಗಿ, ಆರ್ಥಿಕ ಉತ್ಪನ್ನಕ್ಕಾಗಿ ಮಾಡುವ ಕೆಲಸ. ಇದಕ್ಕಾಗಿ ಒಂದು ಮನೆ, ಬಾವಿ, ಸ್ವಲ್ಪ ಜಮೀನು, ಒಂದು ಜೊತೆ ಎತ್ತುಗಳು ಇರುತ್ತವೆ. ಶ್ರೀ ಚೌಡೇಶ್ವರಿ ಮಾತೆಯು ನಂದವರೀಕರಿಗೆ ಧಾರ್ಮಿಕವಾದ ಪರಿಶುದ್ಧ ಜೀವನ ನಡೆಸುವಂತೆ, ವೇದಶಾಸ್ತ್ರಗಳನ್ನು ಎತ್ತಿ ಹಿಡಿಯುವಂತೆ, ವಿಶಾಲ ಮನಸ್ಸಿನಿಂದ ಕೊಡುಗೈ ದಾನಿಗಳಾಗಿ ಅನ್ನದಾತರಾಗಿರುವಂತೆ ವಿಧಿಸಿದ್ದಾಳೆಂಬುದು ಚೌಡೇಶ್ವರೀ ಮಾತೆಯ ಕಥೆಯಿಂದ ತಿಳಿದುಬರುತ್ತೆ.

ನಂದವರಂನಲ್ಲಿರುವ ಶ್ರೀ ಚೌಡೇಶ್ವರಿ ದೇವಾಲಯವನ್ನು ಓಂಕಾರ ತತ್ವದ ಸಂಕೇತದೊಡನೆ ಕಟ್ಟಲಾಗಿದೆ ಎನ್ನಬಹುದು. ಆ ಕಾಲದಲ್ಲಿ ವೈದಿಕ ವಿಜ್ಞಾನ ಪೀಠವನ್ನು ಸ್ಥಾಪಿಸಿದ್ದಂತೆ ತಿಳಿದುಬರುತ್ತೆ. ದೇವಾಲಯಕ್ಕೆ ಒಂದೇ ಒಂದು ಗೋಪುರವಿದ್ದು, ಇದು ಪೂರ್ವಾಭಿಮುಖವಾಗಿದೆ. ಮಹಾದ್ವಾರದ ಮೇಲಿರುವ ಈ ಗೋಪುರದ ಮೇಲೆ ಆರು ಚಿಕ್ಕದಾದ ವಾಸ್ತು ನಿರ್ಮಿತಿಯ ದ್ವಾರಗಳಿವೆ. ಇದನ್ನು ದ್ರಾವಿಡ ವಾಸ್ತುಶಿಲ್ಪಶೈಲಿಯಲ್ಲಿ ಕಟ್ಟಲಾಗಿದೆ. ೧೫ನೇ ಶತಮಾನದ ಅಂತ್ಯ ಮತ್ತು ೧೬ನೇ ಶತಮಾನದ ಆರಂಭದಲ್ಲಿ ಈ ಗೋಪುರವನ್ನು ನಿರ್ಮಿಸಿದಂತಿದೆ. ಶಕ ೧೪೫೮ ಮನ್ಮಥನಾಮ ಸಂವತ್ಸರ ಮಾರ್ಗಶಿರ ಶುದ್ಧ ೧೫ ರಂದು, ಅಂದರೆ ಕ್ರಿ.ಶ. ೧೫೩೫ ಡಿಸೆಂಬರ್ ತಿಂಗಳು ೯ ಗುರುವಾರದಂದು ಈ ಗೋಪುರವನ್ನು ಸ್ಥಾನಪತಿ ಗಿರಿಯಪ್ಪ ಮತ್ತು ಸಲಕರಾಜು ಪೆದ್ದತಿಮ್ಮರಾಜು" ಎಂಬುವರು ಕಟ್ಟಿಸಿದಂತೆ ದೇವಾಲಯದಲ್ಲಿ ಸ್ಥಾಪಿಸಲಾದ ಶಾಸನದಿಂದ ತಿಳಿದುಬರುತ್ತೆ. ಇದೂ ಅಲ್ಲದೆ ಅಮ್ಮನವರಿಗೆ ಒಂದು ಪಲ್ಲಕ್ಕಿಯನ್ನು ಕಾಣಿಕೆಯಾಗಿ ಕೊಟ್ಟಂತೆ ತಿಳಿದುಬರುತ್ತೆ. ಮಳೆ ಬಿಸಿಲುಗಳಿಗೆ ತುತ್ತಾಗಿ ಗೋಪುರವು ಶಿಥಿಲವಾಗುವ ಸ್ಥಿತಿಯಲ್ಲಿದೆ. ಅವುಗಳ ದುರಸ್ತಿ ಕಾರ್ಯವನ್ನು ಮಾಡಿ ಮುಂದಿನ



ಹೀಳಿಗೆ ಗಾಗಿ ಉಳಿಸುವುದು ಸೂಕ್ತವೆನಿಸುತ್ತದೆ. ಮಹಾದ್ವಾರ, ಸಭಾಂಗಣ, ಗರ್ಭಗುಡಿ, ದೇವಾಲಯದ ಸುತ್ತಲೂ ಪ್ರಾಕಾರದ ಗೋಡೆಗಳನ್ನೂ ಕಲ್ಲು ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಪ್ರಾಕಾರದ ಒಳಗೆ ಹಜಾರಗಳ ಮತ್ತು ಕೊಟ್ಟಡಿಗಳ ಕಲ್ಲು ಕಟ್ಟಡವಿದೆ. ಎಡಗಡೆ ಕಾಂಪೌಂಡು ಆತುಕೊಂಡಂತೆ ಒಂದು ವಿಸ್ತಾರವಾದ ಬಾವಿ ಇದ್ದು ದೇವಾಲಯಕ್ಕೆ ದೇಕಾದ ನೀರನ್ನು ಪೂರೈಸಲಾಗುವುದು. ದೇವಾಲಯದ ಒಳಗಡೆ ಕೆಲವು ಸವೆದುಹೋದ ಶಿಲಾಶಾಸನಗಳಿವೆ. ಈ ಶಾಸನಗಳೆಲ್ಲವೂ ತೆಲುಗು ಭಾಷೆಯಲ್ಲಿವೆ. ಇವುಗಳ ನಂದವರೀಕರ ಮತ್ತು ತೊಗಟವೀರರ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಸಾಧಾರಣವಾಗಿ ಈ ಶಾಸನಗಳು ಕಣ್ಣಿಗೆ ಬೀಳುವುದಿಲ್ಲ. ದೇವಾಲಯದಲ್ಲಿ ಪೀಠದ ಮೇಲೆ ಮತ್ತು ನೆಲದ ಮೇಲಿರುವ ಶಾಸನಗಳನ್ನು ಭದ್ರವಾಗಿ ರಕ್ಷಿಸಲಾಗಿದೆ. ದೇವಾಲಯಕ್ಕೆ ವಿದ್ಯುತ್ ದೀಪಗಳನ್ನು ಹಾಕಲಾಗಿದೆ. ದೇವಾಲಯಕ್ಕೆ ಎದುರಾಗಿ ದೇವಾಲಯಕ್ಕೆ ಸಂಬಂಧಿಸಿದ ಪುಷ್ಕರಿಣಿ ಇದೆ. ಪುಷ್ಕರಿಣಿಯು ದೇವಾಲಯದಷ್ಟೇ ಪ್ರಾಚೀನವಾದುದು. ಎಂತಹ ಭೀಕರ ಬರಗಾಲದಲ್ಲೂ ಇಡೀ ವರ್ಷ ನೀರು ಇರುತ್ತೆ ಎನ್ನಬಹುದು.

ಮೇಲೆ ತಿಳಿಸಿರುವಂತೆ ಕರ್ನೂಲ್ ಜಿಲ್ಲೆಯ ನಂದವರಂನಲ್ಲಿ ನೆಲಸಿರುವ ಶ್ರೀ ಚೌಡೇಶ್ವರಿ ದೇವಿಯ ದೇವಾಲಯವು ಎಲ್ಲಾ ನಂದವರೀಕರಿಗೂ ಪವಿತ್ರ ಮತ್ತು ಪ್ರಮುಖವಾದ ಪುಣ್ಯಕ್ಷೇತ್ರವಾಗಿದೆ. ಅಮ್ಮನವರ ಇನ್ನೂ ಕೆಲವು ದೇವಾಲಯಗಳು ದೇರೆ ದೇರೆಯಕಡೆ ಇವೆ.

ಉದಾಹರಣೆಗೆ : ಮೈಸೂರು, ಬೆಂಗಳೂರು, ಹೈದರಾಬಾದು, ಕೋಲಾರಜಿಲ್ಲೆ ಮುಂತಾದ ಕಡೆಯಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರಿನಲ್ಲೂ ಮೂಕಾಂಬಿಕೆ ಇದೆ. ಕೋಲಾರ ಜಿಲ್ಲೆಯ ಹೆಚ್ಚೂಕಡಿಮೆ ಎಲ್ಲ ಹಳ್ಳಿಗಳಲ್ಲೂ ಊರ ನೆರೆಹೊರೆಯಲ್ಲಿ ಒಂದು ಕಲ್ಲು ಕಟ್ಟಡದ ಒಂದು ಚಿಕ್ಕ ದೇವಸ್ಥಾನ ಮತ್ತು ಒಂದು ತೋಪು. ಅದನ್ನು ಚೌಡೇಶ್ವರ ತೋಪುಎಂತಲೂ ಆಕೆಯನ್ನು ಗ್ರಾಮದೇವತೆಯೆಂತಲೂ ಪೂಜಿಸುವುದುಂಟು.

ವಾರ್ಷಿಕ ಹಬ್ಬವನ್ನು ಪ್ರತಿವರ್ಷವು ಯುಗಾದಿಯ ಸಮಯದಲ್ಲಿ ಅತ್ಯಂತ ಆಡಂಬರ – ಸಡಗರದಿಂದ ಆಚರಿಸುತ್ತಾರೆ. ನಂದವರಂನಲ್ಲಿ ಪೂಜಿಸುತ್ತಿರುವ ದೇವಿಯ ವಿಗ್ರಹವನ್ನು ಒಮರದಿಂದ ಮಾಡಲಾಗಿದೆ. ಕಾಶೀಕ್ಷೇತ್ರದಿಂದ ಆಗಮಿಸಿದ ದೇವಿಯು ದೇವಸ್ಥಾನದ ಗರ್ಭಗುಡಿಯ ನೆಲಮಾಳಿಗೆಯಲ್ಲಿರುವುದಾಗಿ ನಂಬಲಾಗಿದೆ. ದೇವಿಯ ಸ್ವರೂಪವನ್ನು ಕಂಡಂತಹವರು ಕಲ್ಲಿನಲ್ಲಿ ಕಡೆದು ಕೊಡುವಂತಹವರು ಆಗ್ಗೆ ಸಿಗಲಿಲ್ಲವಾಗಿ ವಿಗ್ರಹವನ್ನು ಮರದಿಂದ ಮಾಡಿ ಪವಿತ್ರಗೊಳಿಸಿ ಪ್ರತಿಷ್ಠಾಪಿಸುವವರಿಗೆ ಅದೇ ವಿಗ್ರಹವಿತ್ತು ಎಂಬುದು ಅಲ್ಲಿನ ಕ್ರಿ. ಶ. ೧೭೦೭ ವಿಶ್ವಾವಸುಶ್ರಾವಣ ಶುದ್ಧ ದಶಮಿ ಅಂದರೆ ಕ್ರಿ.ಶ. ೧೭೮೫ ಆಗಸ್ಟು ತಿಂಗಳು ೧೫ ರ ಶಿಲಾಶಾಸನದಿಂದ ತಿಳಿದುಬರುತ್ತೆ. ಆದರೆ ಮರದಿಂದ ಮಾಡಿರುವ ದೇವರ ವಿಗ್ರಹಗಳು ಹೆಚ್ಚಾಗಿ ಎಲ್ಲೂ ಕಂಡುಬರುವುದಿಲ್ಲ. ಪುರಿಯ ಪ್ರಖ್ಯಾತ ಶ್ರೀ ಜಗನ್ನಾಥನ ವಿಗ್ರಹವು ಮರದಿಂದ ಮಾಡಲಾಗಿದೆ.

ಆದರೆ ಅನೇಕ ಕಡೆ ಉತ್ಸವ ಮೂರ್ತಿಗಳನ್ನು ಮರದಿಂದ ಮಾಡಲಾಗಿರುತ್ತದೆ. ಇಲ್ಲಿ ಚೌಡೇಶ್ವರಿ ದೇವಿಯ ಪಂಚಲೋಹದ ಉತ್ಸವಮೂರ್ತಿಯನ್ನು ಗರ್ಭಗುಡಿಯಲ್ಲಿ ಕಬ್ಬಿಣದ ಪೆಟ್ಟಿಗೆಯಲ್ಲಿಡಲಾಗಿದೆ. ಇದನ್ನು ಹಬ್ಬದ ದಿನಗಳಲ್ಲಿ ಮೆರವಣಿಗೆಗಾಗಿ ಮಾತ್ರ ಹೊರಕ್ಕೆ ತೆಗೆಯಲಾಗುವುದು.

ನಂದವರದಲ್ಲಿ ದೇವಿಯ ಮೂರ್ತಿಯು ಕುಳಿತಿರುವ ಭಂಗಿಯಲ್ಲಿದೆ. ನಾಲ್ಕು ಕೈಗಳಿವೆ. ಬಲಗಡೆ ಎರಡು ಕೈಗಳಪೈಕಿ ಒಂದರಲ್ಲಿ ಶಕ್ತಿ ಮತ್ತೊಂದರಲ್ಲಿ ತ್ರಿಶೂಲಗಳಿವೆ. ಎಡಗಡೆಯ ಒಂದು ಕೈಯಲ್ಲಿ ಡಮರುಗ, ಇನ್ನೊಂದು ಕೈಲಿ ಪಾಣಪಾತ್ರವು ಇದೆ. ಇದು ಶಕ್ತಿ ಎಂಬುದಾಗಿ ತಿಳಿಯಲಾಗಿದೆ. ಕೆಲವು ಕಡೆ ದೇವಿಯವಿಗ್ರಹ ನಿಂತಿರುವ ಭಂಗಿಯಲ್ಲಿದೆ. ಆದರೆ ಆಕೆಯು ಯಾವ ಭಂಗಿಯಲ್ಲೇ ಇರಲಿ ಎಲ್ಲಾ ಕಡೆಯೂ ಆಕೆಯನ್ನು ಭಕ್ತಿಯಿಂದ ಗೌರವದಿಂದ ಪೂಜಿಸಲಾಗುತ್ತಿದೆ. ಆಕೆಯು ಆದಿ ಶಕ್ತಿ, ಶಿವ ಶಕ್ತಿ, ವೈಷ್ಣವ ಶಕ್ತಿ, ಪರಾ ಶಕ್ತಿ ಮೊದಲಾದವುಗಳನ್ನೆಲ್ಲ ತನ್ನಲ್ಲಿ ಅಂತರ್ಗತ ಮಾಡಿಕೊಂಡಿರುವಳೆಂದು ನಂಬಲಾಗಿದೆ.

ನಂದವರದಲ್ಲಿ ವಾರ್ಷಿಕ ಹಬ್ಬವನ್ನು ಪ್ರತಿವರ್ಷ ಯುಗಾದಿಯ ಸಮಯದಲ್ಲಿ ಅತ್ಯಂತ ವೈಭವದಿಂದ ಆಚರಿಸಲಾಗುತ್ತಿದೆ. ಆ ಹಬ್ಬದಲ್ಲಿ ಸುಮಾರು ೧೦--೧೫ ಸಾವಿರ ಭಕ್ತಾದಿಗಳು ಪಾಲ್ಗೊಳ್ಳುತ್ತಾರೆ. ಅಲ್ಲಿಗೆ ಬರುವಂತಹ ಭಕ್ತರಿಗೆ ಅನಸತ್ರ ಇರುತ್ತದೆ. ದೇವಿಗೆ ಅನೇಕ ರೀತಿಯ ಸೇವೆಗಳು ನಡೆಸುವರು.

ಮೇಲೆ ತಿಳಿಸಿದಂತೆ ನಂದವರಂನ ನಂದನ ಚಕ್ರವರ್ತಿ ಆತನ ಆಡಳಿತಲ್ಲಿದ್ದಂತಹ ಆನಂದವರಪುರಂ ಎನ್ನುವ ನಗರವನ್ನು ಬ್ರಾಹ್ಮಣರಿಗೆ ಕೊಟ್ಟನೆಂದು, ಆ ಬ್ರಾಹ್ಮಣರನ್ನು ನಂದವರೀಕರೆನ್ನಲಾಯಿತೆಂದು ನಂಬಲಾಗಿದೆ. ಚೌಡೇಶ್ವರಿ ಮಹಾತ್ಮೆಯಲ್ಲಿ ನಂದರಾಜ ಕ್ಷತ್ರಿಯನೆಂದು ಚಂದ್ರವಂಶದ ಪಾಂಡುರಾಜನ ಸಂತತಿಯೆಂದು ತಿಳಿಸಲಾಗಿದೆ. ಈತನ ಆಡಳಿತದ ಬಗ್ಗೆ ವಿವರಗಳನ್ನಾಗಲಿ, ಜೀವಿಸಿದ್ದ ಕಾಲವಾಗಲಿ ಖಚಿತವಾಗಿ ತಿಳಿಯಲು ಸಾಧ್ಯವಾಗಿಲ್ಲ. ನಂದವರಂ ಗ್ರಾಮವನ್ನು ಪಡೆದುಕೊಂಡವರು ಇಂದಿಗೂ ಇದ್ದಾರೆ. ನಂದನ ಚಕ್ರವರ್ತಿಯು, ೧೧ನೇ ಶತಮಾನದಿಂದ ೧೪ ನೇ ಶತಮಾನದ ನಡುವೆ (ಕ್ರಿ.ಶ. ೧೦೦೦ ದಿಂದ ೧೩೯೯) ಜೀವಿಸಿದ್ದಿರಬಹುದೆಂದು ನಂಬಲಾಗಿದೆ. ನಂದವರೀಕರು ಋಗ್ವೇದಿಗಳು. ಆಶ್ವಾಲಾಯನಸೂತ್ರದವರು. ನಂದವರವನ್ನು ಅಗ್ರಹಾರವನ್ನಾಗಿ ಪಡೆದ ೧೩ ಜನ ಮೂಲಪುರುಷರ ಹೆಸರುಗಳು ಹೀಗಿವೆ.

೧) ಅವಧಾನಂ ಪೆದ್ದಿಭಟ್ಲು, ೨) ತರ್ಕಶಾಸ್ತ್ರಂ ಮಾಧವಭಟ್ಲು, ೩) ವೈಶೇಷಿಕಂ ವಿಷ್ಣುವರ್ಧನ ಭಟ್ಲು, ೪) ಮಹಾಭಾಷ್ಯಂ ಮಹದೇವಭಟ್ಲು, ೫) ಮಂತ್ರಶಾಸ್ತ್ರಂ ಕಮಲನಾಭ ಪಂಡಿತುಲು, ೬) ಪುರಾಣಂ ಶ್ರೀಧರಭಟ್ಲು, ೭) ಷಡಂಗಾಲ ನಾರಾಯಣ ದೀಕ್ಷಿತುಲು, ೮) ಪ್ರಭಾಕರಂ ನಾಗಂದ್ವಯ್ಯುಲು, ೯) ಕ್ರಮಧಾಟಿ ಜನಾರ್ಧನಭಟ್ಲು, ೧೦) ದಶಗ್ರಂಥಾಲು ವಿಶ್ವನಾಥಾಧ್ವರ್ಯುಲು, ೧೧) ಸೂರ್ಯಸಿದ್ಧಾಂತಂ ನಾರಾಯಣ ಸೋಮಯಾಜುಲು, ೧೨) ಪುದ್ಯೋತ ನರಸಿಂಹ ಸೋಮಯಾಜುಲು, ೧೩) ಕಾಣಾದಂ ವಿಷ್ಣುವರ್ಧನ ಭಟ್ಲು.

ಈ ಮೂಲಪುರುಷರು ಕಾಶಿಯಿಂದ ಬಂದವರು. ಇವರು ಹೆಸರುಗಳನ್ನು ಗಮನಿಸಿದಾಗ ಇವರು ಉನ್ನತ ಅರ್ಹತೆಗಳನ್ನು ಮತ್ತು ಮಹತ್ವದ ಸ್ಥಾನಗಳನ್ನು ಪಡೆದವರೆಂದು ತಿಳಿದುಬರುತ್ತೆ. ಅವರವರ ಹೆಸರಿನೊಂದಿಗಿರುವ ಕ್ಷೇತ್ರಗಳಲ್ಲಿ ಅವರವರು ಸಾಕಷ್ಟು ಪರಿಶ್ರಮವನ್ನು ಹೊಂದಿ ಅಧಿಕಾರಯುತ ವ್ಯಕ್ತಿಗಳಾಗಿದ್ದಂತೆ ತೋರುತ್ತದೆ. ಭಕ್ತರು ನಂಬುವಂತೆ ಶ್ರೀ ಚೌಡೇಶ್ವರಿದೇವಿ ಈ ವಿದ್ವಾಂಸರ ಪ್ರಾರ್ಥನೆಗೆ ಓಗೊಟ್ಟು ಅನುಗ್ರಹಿಸಿ ಕಾಶಿಯಿಂದ ನಂದವರಂಗೆ ಸಾಕ್ಷಿಯಾಗಿ ಬಂದಳು ಎಂದರೆ, ಇಂತಹ ವಿದ್ವನ್ಮಣಿಗಳ ಅಪೂರ್ವ ಸಾಮರ್ಥ್ಯವನ್ನು ಕಂಡಾಗ ಅದೇನು ಅತಿಶಯವಾದ ಅಥವಾ ಆಶ್ಚರ್ಯಕರವಾದ ಅಂಶವಾಗಿರಲಾರದು ಅನ್ನಿಸುತ್ತದೆ. ಎಲ್ಲಾ ಮೂಲಪುರುಷರೂ "ವೈದಿಕ" ರಾಗಿದ್ದರು ಎಂಬುದನ್ನು ಧ್ವನಿಸುತ್ತದೆ. ವೈದಿಕ ಅಂದರೆ ಸಾಮಾನ್ಯವಾಗಿ ಯಾರು ವೇದಗಳನ್ನು ಅಧ್ಯಯನ ಮಾಡುತ್ತಾರೋ ಅವರು ಪ್ರಾಚೀನಕಾಲದಲ್ಲಿ ಇತರ ಬ್ರಾಹ್ಮಣರ ಹಾಗೆ ನಂದವರೀಕರು ವೇದ ಮತ್ತು ಶಾಸ್ತ್ರಗಳ ಅಧ್ಯಯನವನ್ನು ನಡೆಸಿದ್ದರು. ಹದಿಮೂರು ಮೂಲಪುರುಷರ ವಂಶಸ್ಥರೆಂದು ತಿಳಿಯಲಾಗಿದೆ. ಕಾಲಾಂತರದಲ್ಲಿ ಇವರು ದೇಶದ ದೇರೆ ದೇರೆಯ ಕಡೆಗೆ ಶಾಶ್ವತವಾಗಿ ವಲಸೆ ಹೋದದ್ದ

ರಿಂದ, ಅವರು ಹಿಡಿದ ವೃತ್ತಿಗಳಿಂದಾಗಿ ಹಾಗೂ ವೇದಶಾಸ್ತ್ರಗಳ ಅಧ್ಯಯನಕ್ಕೆ ಹೊರತಾಗಿ ಅವರು ಕೈಗೊಂಡ ಇತರ ಉದ್ಯೋಗಗಳಿಂದಾಗಿ ಕ್ರಮೇಣ ಅವರಿಗೆ ವೈದೀಕರಿಗಿಂತ ಭಿನ್ನವಾದ "ನಿಯೋಗಿ" ಗಳೆಂಬ ಹೆಸರು ಪ್ರಾಪ್ತವಾಯಿತು. ವೇತನಕ್ಕಾಗಿ ನಿರ್ದಿಷ್ಟ ಕೆಲಸದ ಮೇಲೆ ನಿಯೋಜಿಸಲ್ಪಟ್ಟವನೇ "ನಿಯೋಗಿ".

೫೦೦ ಕುಟುಂಬಗಳ, ೧೩ ಗೋತ್ರದವರಿಗೆ ನಂದವರದ ಕೊಡುಗೆ ನಿರ್ವಿವಾದ ಸಿದ್ಧ ವಿಷಯ ಎಂಬುದಕ್ಕೆ ಆ ಸ್ಥಳ ಮತ್ತು ಆ ಕುಟುಂಬಗಳ ನಂದವರೀಕರು ಇಂದಿಗೂ ಅಸ್ತಿತ್ವದಲ್ಲಿರುವುದೇ ಸಾಕ್ಷಿ. ಶತಮಾನಗಳಿಂದ ನಂದವರೀಕರಿಗೆ ಸಾಗಿಬಂದು ಇಂದಿಗೂ ಎಲ್ಲರ ನೆನಪಿನಲ್ಲಿ ಹಸುರಾಗಿರುವ ದಂತಕಥೆ. ನಗರವನ್ನು ಕೊಟ್ಟಂತ ರಾಜ ನಂದ ಅಥವಾ ನಂದನ ಚಕ್ರವರ್ತಿ ನಂದ ವರೀಕ, ಪೀಳಿಗೆಯವರು ಶತಮಾನಗಳಿಂದ ಇಂದಿನವರಿವಿಗೂ ನಂದವರಂ ಮತ್ತು ಚೌಡೇಶ್ವರಿದೇವಿಯ ನೆನಪನ್ನು ಹಚ್ಚಹಸಿರಾಗಿ ಉಳಿಸಿಕೊಂಡು ಬಂದಿದ್ದಾರೆ.

ನಂದನ ಚಕ್ರವರ್ತಿಯ ಕೊಡುಗೆ ಅಥವಾ ದಾನ ಅನೇಕ ವೃತ್ತಿ ಮತ್ತು ಉದ್ಯೋಗಗಳನ್ನು ಒಳಗೊಂಡಿತ್ತು. ಕಾಶಿಯಿಂದ ಬಂದರೆಂದು ಹೇಳಲಾದ ೫೦೦ ಬ್ರಾಹ್ಮಣ ಕುಟುಂಬಗಳವರೆಲ್ಲರೂ ಈ ವೃತ್ತಿಗಳನ್ನು ತಮ್ಮ ತಮ್ಮಲ್ಲಿ ಹಂಚಿಕೊಂಡರು. ಇವರಲ್ಲದೆ ಮತ್ತೊಂದು "ಆರುವೇಲು" ಪಂಗಡದ ದುಗ್ಗಪ್ಪಯ್ಯ ಎನ್ನೊಬ್ಬ ಬ್ರಾಹ್ಮಣ. ತನ್ನದೇ ಆದ ಕಾರಣಗಳಿಂದಾಗಿ ನಂದವರೀಕರೊಂದಿಗೆ ಕಾಶಿಯಿಂದ ಬಂದ ಕಾರಣಕ್ಕಾಗಿ ಈತನಿಗೆ ಭಾಗಸಿಗಲಿಲ್ಲ. ಈತನಿಗೆ ವೃತ್ತಿಯನ್ನು ಕೊಡುವುದು ಸಾಧ್ಯವಿರಲಿಲ್ಲ. ಹಾಗೆ ಮಾಡಿದ್ದ ಪಕ್ಷಕ್ಕೆ ದೇವಿಯ ಸಾನ್ನಿಧ್ಯದಲ್ಲಿ ರಾಜನೊಡನೆ ಮಾಡಿಕೊಂಡಂತಹ ಒಪ್ಪಂದಕ್ಕೆ ಭಂಗಬರುತ್ತಿತ್ತು. ಈ ಕಾರಣಕ್ಕಾಗಿ ವೃತ್ತಿಗೆ ಬದಲು ಅದರ ಪರಿಹಾರವಾಗಿ ಚಿನ್ನವನ್ನು ಕೊಡಲು ಆತನು ಅದನ್ನು ಸ್ವೀಕರಿಸದೆ ನಂದವರೀಕರಿಗೆ "ಕೆಲವುಕಾಲ ನೀವು ಈ ಕೊಡುಗೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುವಿರಿ" ಎಂದು ಅನ್ಯಾಯವಾಗಿ ಶಾಪವನ್ನು ಕೊಟ್ಟನು. ಈ ಶಾಪ ನಿಜವಾಯಿತೆನ್ನುವುದು ಮಹಾಮಂಡಲೇಶ್ವರ "ರಾಮರಾಜು ತಿರುಮಲರಾಯಪ್ಪದೇವ" ಎನ್ನುವವರು ನಂದವರೀಕರಿಗೆ ಪುನಃ ಕೊಡುಗೆಯನ್ನು ಹಿಂದಕ್ಕೆ ಕೊಟ್ಟ ಎಂದು ದೇವಾಲಯದ ಕ್ರಿ.ಶ. ೧೫೭೦ ಶಿಲಾಶಾಸನದಿಂದ ತಿಳಿದುಬರುತ್ತೆ. ಕಾಶಿಯಲ್ಲಿ ಶ್ರೀ ಚೌಡೇಶ್ವರಿದೇವಿಯ ಪಹರೆಯವರಾಗಿದ್ದ ಅನೇಕ ಮಂದಿ ತೊಗಟವೀರ ಕ್ಷತ್ರಿಯರು ದೇವಿಯ ಜೊತೆಯಲ್ಲಿ ನಂದವರಂಗೆ ಬಂದು ಆಕೆಯ ಉದ್ದೇಶ ತೀರಿದ ನಂತರ ಅದೃಶ್ಯಳಾದ ಮೇಲೆ ನಂದವರಂನಲ್ಲೇ ನೆಲಸಿದರು. ಇಂದಿಗೂ ನಂದವರಂನಲ್ಲಿ ದೇವಿಯನ್ನು ಅತ್ಯಂತ ಭಕ್ತಿಯಿಂದ ತೊಗಟ ವೀರಕ್ಷತ್ರಿಯರು ಆರಾಧಿಸುತ್ತಿದ್ದಾರೆ. ಮುಖ ಮಂಟಪದ ಎಡಗಡೆ ಶಕ ೧೪೭೫ ರ ಶಾಸನವು ಚೌಡೇಶ್ವರಿಭಕ್ತರಿಗೆ ನೀಡಲಾಗಿರುವ ಮಾನ್ಯತೆ ಮತ್ತು ಅನುಕೂಲತೆಗಳ ಬಗ್ಗೆ ತಿಳಿಸುತ್ತದೆ.

ಮೇಲೆ ತಿಳಿಸಿದ ಬ್ರಾಹ್ಮಣಕುಟುಂಬಗಳಲ್ಲಿ ನಾಲ್ಕು ಬ್ರಾಹ್ಮಣಕುಟುಂಬಗಳು ನಂದನರಾಜನ ಪುರೋಹಿತರಾಗಿದ್ದು ನಂದರಾಜನು ನಂದ್ಯಾಲಕ್ಕೆ ಸ್ಥಳಾಂತರಿಸಿದಾಗ ನಂದವರೀಕರಿಗೆ ಇಡಿ ನಗರವನ್ನೇ ಕೊಡುಗೆಯಾಗಿತ್ತಿರುವುದರಿಂದ ಈ ಆಸ್ಥಾನ ಪುರೋಹಿತರನ್ನು ಇಲ್ಲಿಯೇ ಬಿಟ್ಟು ಹೋದರು. ಈ ಆಸ್ಥಾನ ಪುರೋಹಿತ ಕುಟುಂಬಗಳಲ್ಲಿ ಒಂದಾದ ಸಾಳುವ ಕುಟುಂಬದಲ್ಲಿ ತಿಮ್ಮರಸು ಹುಟ್ಟಿದನು. ಮುಂದೆ ಈತ ವಿಜಯನಗರದ ಅರಸನಾದ ಶ್ರೀಕೃಷ್ಣದೇವರಾಯನ (ಕ್ರಿ.ಶ. ೧೫೦೯--೧೫೩೦) ಪೋಷಕನು, ಅತ್ಯಂತ ಬುದ್ಧಿವಂತ ಪ್ರಧಾನ ಮಂತ್ರಿಯು ಆಗಿದ್ದನು. ಕೃಷ್ಣದೇವರಾಯನು ಈತನನ್ನು ಪ್ರೀತಿಯಿಂದ ಆತ್ಮೀಯತೆಯ ಕುರುಹಾಗಿ "ಅಪ್ಪಾಜಿ" ಎಂದು ಕರೆಯುತ್ತಿದ್ದನು. ಅದರ ಫಲವಾಗಿ ಈತನನ್ನು ಸಾಳುವ ತಿಮ್ಮರಸ" ಎಂದೂ "ಅಪ್ಪಾಜಿತಿಮ್ಮರಸ" ಎಂದೂ ಕರೆಯಲಾಯ್ತು.

ನಂದನ ಚಕ್ರಮವರ್ತಿಯಿಂದ ನಂದವರೀಕರಿಗೆ ನಂದವರಂ ನಗರ ಕೊಡುಗೆಯಾಗಿ ಬಂದ ದಿನಾಂಕ ೧೫-೨-೧೦೪೯ (ಹಳೆಯ ತಾಳಗರಿಯ ಸಂಸ್ಕೃತ ಶ್ಲೋಕಗಳ ಪ್ರಕಾರ ಶಾಲಿವಾಹನ ಶಕ ವರ್ಷದ ೯೭೦ ವಿಳಂಬಿ ಸಂವತ್ಸರ, ಮಾಘಮಾಸ ಸೋಮವಾರ ಅಮಾವಾಸ್ಯೆ ಶತಭಿಷ ನಕ್ಷತ್ರ ಎಂದಂತಿದೆ.) ನಂದನಚಕ್ರವರ್ತಿಯು ನಂದ್ಯಾಲಕ್ಕೆ ಸ್ಥಳಾಂತರಿಸಿದ ನಂತರ ನಂದರಾಜ ಅಲ್ಲಿ ಒಂದು ಕೋಟೆಯನ್ನು ಕಟ್ಟಿಸಿಕೊಂಡು ವಾಸಮಾಡುತ್ತಿದ್ದು ಮತ್ತೆ ನಂದ್ಯಾಲದಿಂದ ೧೫ ಕಿ.ಮೀ ದೂರದಲ್ಲಿರು ಮಹಾ ನಂದಿಯಲ್ಲಿ "ನಂದೀಶ್ವರ" ದೇವಾಲಯವನ್ನು ಕಟ್ಟಿಸಿದಂತೆ ತಿಳಿದುಬರುತ್ತೆ.

ನಂದವರೀಕರು ನಂದವರದಲ್ಲಿ ನೆಲಸಿ ಕ್ರಮೇಣ ತಮ್ಮ ವೃತ್ತಿಗಳಲ್ಲಿ ತೊಡಗಿ ತಮ್ಮ ದೈನಂದಿನ ಜೀವನಕ್ಕೆ ಹೊಂದಿಕೊಂಡು ಒಂದೆರಡು ಶತಮಾನಗಳ ಕಾಲ ಸಂತೋಷದಿಂದ ಇದ್ದರೆಂದು ತೋರುತ್ತದೆ. ಅವರ ಆರ್ಥಿಕ ಸಂಪಾದನೆಯು ಮುಖ್ಯವಾಗಿ ವ್ಯವಸಾಯ, ಕುಶಲ ಕಲೆಗಳು, ಶ್ರೀ ಚೌಡೇಶ್ವರಿ ದೇವಿಯ ಪೂಜೆ, ವೇದಶಾಸ್ತ್ರಗಳ ಅಧ್ಯಯನ, ಹರಿ



ಕಥೆಗಳು, ಭಜನೆ, ಉಪನ್ಯಾಸಗಳು ಮುಂತಾದವುಗಳಲ್ಲಿ ಸಾಗುತ್ತಿದ್ದಿತು. ಕಾಲಾಂತರದಲ್ಲಿ ನಂದವರೀಕರು ಕ್ರಮೇಣ ಜೀವನದ ಕಟುವಾಸ್ತವಗಳನ್ನು ಎದುರಿಸಬೇಕಾಗಿದ್ದುದರಿಂದಲೂ ಬರಗಾಲದಿಂದಾಗಿ ಉಂಟಾದ ಆರ್ಥಿಕ ಮುಗ್ಗಟ್ಟು, ರಾಜಕೀಯ ಅನಿಶ್ಚಿತತೆ, ವ್ಯವಸಾಯದಲ್ಲಿ ಕಡಿಮೆ ಉತ್ಪತ್ತಿ, ಕ್ರಮೇಣ ಏರುತ್ತಿದ್ದ ಅಪಾರ ಜನಸಂಖ್ಯೆ ಮುಂತಾದವು ತಮ್ಮ ಕಷ್ಟಸುಖ ಗಳನ್ನು ಇವರು ದೇಶದ ಇನ್ನಿತರ ಸಹಜೀವಿಗಳೊಂದಿಗೆ ಹಂಚಿಕೊಳ್ಳಬೇಕಾಯಿತು.

ಉತ್ತಮ ಜೀವನಕ್ಕಾಗಿ ಹೊಸಕ್ಷೇತ್ರಗಳನ್ನು ಹುಡುಕಿಕೊಂಡು ಹೋದಂತೆ ಕಾಣುತ್ತೆ. ಬರುಬರುತ್ತಾ ಅವರ ವೇದಶಾಸ್ತ್ರಗಳ ಅಧ್ಯಯನ ಮತ್ತು ಧಾರ್ಮಿಕ ಸಾಧನೆಗಳು ಬಿಟ್ಟುಹೋದಂತೆ ಕಾಣುತ್ತೆ. ಇದರ ಫಲವಾಗಿ ಮುಂದೆ ಕೆಲವು ಕಾಲದ ಮಟ್ಟಿಗೆ ಅಗ್ರಹಾರ ಮತ್ತು ವೃತ್ತಿಗಳು ಕಳೆದುಕೊಂಡರೆಂದು ತಿಳಿದುಬರುತ್ತೆ. ಇದು ಬಹುಶಃ ದುಗ್ಗಪ್ಪಯ್ಯನ ಶಾಪದಿಂದಲೋ ಅಥವಾ ಬೇರೆಯಾವುದೇ ಕಾರಣದಿಂದಲೋ ಇರಬಹುದು. ಈ ಸಂಗತಿ ನಂದವರಂನ ಶ್ರೀ ಚೌಡೇಶ್ವರಿ ದೇವಾಲಯದ ಶಾಸನದಿಂದ ತಿಳಿದುಬರುತ್ತೆ. ಈ ಶಾಸನ ಶಕ ೧೪೯೨ ಪ್ರಮೋದ ಸಂವತ್ಸರ ಆಷಾಡಶುದ್ಧ ೧೨ ಗುರುವಾರ ಅಂದರೆ ೧೫-೬-೧೫೭೦ ತಾರೀಖಿನಂದು ನಂದವರಂ ಬ್ರಾಹ್ಮಣರಿಗೆ ಅಗ್ರಹಾರವನ್ನು ಹಿಂದಕ್ಕೆ ಕೊಡಲಾದ ಸಂದರ್ಭದಲ್ಲಿ ಬರೆಯಲಾಗಿದೆ. ಮಹಾಮಂಡಲೇಶ್ವರ ರಾಮರಾಜು ತಿರುಮಲ ರಾಜಯ್ಯದೇವ ಮಹಾರಾಜನಿಂದ ಕೆಲವು ಕರಾರುಗಳ ಮೇಲೆ ಹಿಂದಕ್ಕೆ ಕೊಡಿಸಲಾಯಿತು ಎಂದು ಬರೆಯಲಾಗಿದೆ.

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರ ಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸ. ದೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.

ಶಿಲಾಶಾಸನದಲ್ಲಿ ಗೊತ್ತುಮಾಡಿರುವ ಕರಾರುಗಳೆಂದರೆ--

೧) ನಂದವರ ಬ್ರಾಹ್ಮಣರು ಮೊದಲಿನಂತೆ ವೇದ ಮತ್ತು ಶಾಸ್ತ್ರಾಧ್ಯಯನವನ್ನು ಮಾಡಬೇಕು.

೨) ತಮ್ಮ ಸಮಾಜದಲ್ಲಿ ಕನ್ಯಾಶುಲ್ಕವನ್ನು ತೆಗೆದುಕೊಳ್ಳುವ ಪದ್ಧತಿಯನ್ನು ಬಿಡಬೇಕು.

ಈ ಎರಡನೆಯ ಕರಾರು ಸಮಾಜದಲ್ಲಿ ಪಿಡುಗಾಗಿದ್ದ ಅನಿಷ್ಟಪರಿಣಾಮ ಮತ್ತು ವೇದಶಾಸ್ತ್ರಗಳ ಅಧ್ಯಯನವನ್ನು ಕಡೆಗಣಿಸಿದುದು-- ಇವೆರಡೂ ಸೇರಿ ಬ್ರಾಹ್ಮಣರ ಮೇಲೆ ರಾಜನ ಕೋಪ ಕೆರಳಿ ಪರಂಪರೆಯಿಂದ ಬಂದ ಅವರ ಅಗ್ರಹಾರಗಳನ್ನು ವಶಪಡಿಸಿಕೊಂಡಂತೆ ತಿಳಿದು ಬರುತ್ತೆ. ನಂದವರೀಕರು ತತ್ಕಾಲಿಕವಾಗಿ ಅಗ್ರಹಾರಗಳನ್ನು ವೃತ್ತಿಗಳನ್ನು ಕಳೆದುಕೊಂಡರೂ, ಇದು ಅವರನ್ನು ಸಂಕಷ್ಟಗಳಿಗೆ ಈಡುಮಾಡಿ ಅವರ ಜೀವನ ಸ್ವಲ್ಪಕಾಲದ ಮಟ್ಟಿಗೆ ದಿಕ್ಕು ತಪ್ಪಿದಂತಾಯಿತು. ಕ್ರಮೇಣ ಅವರಿಗೆ ಅದು ಹಿಂತಿರಿಗಿ ಬಂದಂತಾದರೂ ಮೊದಲಿನ ಆಕರ್ಷಣೆ ಮತ್ತು ವೈಭವಗಳನ್ನು ತಂದಂತೆ ತೋರಲಿಲ್ಲ. ಅವರು ಪುನಃ ಅದೇ ಜಾಗಕ್ಕೆ ಅಂಟಿಕೊಳ್ಳದಾದರು, ನಿಧಾನವಾಗಿ ಅವರು ತಮ್ಮ ಜೀವನೋಪಾಯಕ್ಕಾಗಿ ಬೇರೆಯ ಜಾಗಗಳಿಗೆ ವಲಸೆ ಹೋಗುವುದು ಅನಿವಾರ್ಯವಾಯಿತು. ಒಂದಾದ ಮೇಲೆ ಒಂದರಂತೆ ಅವರವರ ಅದೃಷ್ಟ, ಅವರವರ ಧೈರ್ಯ ಅವಕಾಶಗಳಿಗೆ ತಕ್ಕಹಾಗೆ ತಮ್ಮ ಸ್ಥಳಗಳನ್ನು ಆರಿಸಿಕೊಂಡು ಅಲ್ಲಲ್ಲಿಯೇ ನೆಲಸಲು ಪ್ರಾರಂಭಿಸಿದರು.

ಕ್ರಿ. ಶ. ೧೫೭೦ ರಲ್ಲಿ ಅಗ್ರಹಾರಗಳು ನಂದವರೀಕರಿಗೆ ಪುನಃ ಪ್ರಾಪ್ತವಾಗಿ ನಂದವರೀಕರು ಮತ್ತೆ ಹಿಂದಿನಂತೆ ನೆಲಸುವಂತೆ ಆದರೂ ಸಹ ನಂದವರೀಕರು ನಂದವರಂ ನಿಂದ ವಲಸೆ ಪ್ರವಾಹವನ್ನು ನಿಲ್ಲಿಸುವುದರಲ್ಲಿ ಫಲಕಾರಿಯಾಗಲಿಲ್ಲ. ಕಾರಣ ಅಲ್ಲಿ ಪದೇ ಪದೇ ಉಂಟಾಗುತ್ತಿದ್ದ ಬರಗಾಲ ಪರಿಸ್ಥಿತಿ, ಸೋಂಕು ರೋಗ, ಆ ಕಾಲದ ಅನಿಶ್ಚಿತ ರಾಜಕೀಯ ಪರಿಸ್ಥಿತಿ ಮತ್ತು ಆಗಾಗ್ಗೆ ಹಿಂದೂ ಮತ್ತು ಮುಸಲ್ಮಾನರ ಆಧಿಪತ್ಯಕ್ಕಾಗಿ ನಡೆಯುತ್ತಿದ್ದ ಯುದ್ಧ ಮುಂತಾದವುಗಳಿಂದ ಬೇರೆ ದಾರಿಯನ್ನು ಕಾಣದೆ ನಿಧಾನವಾಗಿ ಅಕ್ಕಪಕ್ಕದ ಪ್ರದೇಶಗಳಿಗೆ ವಲಸೆ ಹೋಗಲು ಪ್ರಾರಂಭಿಸಿದರು. ಅವರು ಆಂಧ್ರ, ರಾಯಲಸೀಮ, ತಮಿಳುನಾಡು ಮತ್ತು ಕರ್ನಾಟಕಕ್ಕೆ ನುಗ್ಗಿದರು. ಹರಿಹರ ಬುಕ್ಕರಿಂದ ಸಂಸ್ಥಾಪಿಸಲ್ಪಟ್ಟ ಪ್ರಖ್ಯಾತ ವಿಜಯನಗರ ಸಾಮ್ರಾಜ್ಯಕ್ಕು ಇವರ ಪ್ರವೇಶವಾಯ್ತು. ವಿಜಯನಗರದ ಅರಸರು ಸುಮಾರು ಕ್ರಿಶ. ೧೫೬೫ ರವರವಿಗೂ ಆಳಿದರು. ಶ್ರೀಕೃಷ್ಣ

ದೇವರಾಯನ ಆಸ್ಥಾನಕ್ಕೆ ಅತ್ಯಂತ ಪ್ರಖ್ಯಾತನಂದವ ರೀಕ ಆಂಧ್ರಕವಿತಾಪಿತಾಮಹ ಅಲ್ಲಸಾನಿ ಪೆದ್ದನ (ಕ್ರಿ.ಶ. ೧೪೫೦--೧೫೨೫) ವಲಸೆ ಬಂದನು. ಪೆದ್ದನ ಓರ್ವಕವಿ, ತತ್ವಜ್ಞಾನಿ ಮತ್ತು ಶ್ರೀಕೃಷ್ಣದೇ ವರಾಯನ ಸ್ನೇಹಿತ, ಗುರು, ಮಾರ್ಗದರ್ಶಕನಾ ಗಿದ್ದನು. ಅಲ್ಲಿಗೆ ಆಂಧ್ರಪ್ರದೇಶದ ಕೆಲವು ಅಗ್ರಹಾರ ಗಳ ಆಡಳಿತಗಾರನೂ ಆಗಿದ್ದನು. ಅದ್ವಿತೀಯ ಚಿರ ಸ್ಮರಣೀಯ "ಮನುಚರಿತ್ರಮು", "ಹರಿಕಥಾಸಾ ರಮು" ಅನೇಕ ಕೃತಿಗಳನ್ನು ರಚಿಸಿದ್ದಾನೆ. ಈ ನಂದ ವರೀಕನ ಪ್ರತಿಭೆ ಪಾಂಡಿತ್ಯವನ್ನು ಕುರಿತು ಒಂದು ಪ್ರತ್ಯೇಕ ಸಂಪುಟವನ್ನು ರಚಿಸಿದೇಕಾಗುವುದು.

ಮತ್ತೊಬ್ಬ ಪ್ರಖ್ಯಾತ ನಂದವರೀಕರು -- ಆ ಕಾಲ ದಲ್ಲಿ ವಲಸೆ ಹೋದುದು ಎಂದರೆ ಸುಮಾರು ಕ್ರಿ.ಶ. ೧೪೦೮ -- ೧೫೦೩ ತಾಳ್ಳಪಾಕ ಅನ್ನಮಾಚಾ ರ್ಯರು. ಆಂಧ್ರಪ್ರದೇಶದ ಕಡಪಜಿಲ್ಲೆಯ ತಾಳ್ಳ ಪಾಕ ಎಂಬ ಒಂದು ಸಣ್ಣ ಗ್ರಾಮದಲ್ಲಿ ೯-೫-೧೪೦೮ ರಲ್ಲಿ ಜನಿಸಿದರು. ಇವರು ತಮ್ಮ ತಾರುಣ್ಯದ ದಿನ ಗಳಲ್ಲಿ ತಿರುಮಲೆಗೆ ಬಂದರು. ಇವರು ತಿರು ಪತಿಯ ಶ್ರೀ ವೆಂಕಟೇಶ್ವರನ ಭಕ್ತರೂ, ಪ್ರತಿಭಾ ನ್ವಿತಕವಿಯೂ ಮಹಾನ್ ಕೀರ್ತನಾಚಾರ್ಯರೂ ಆಗಿ ಮೆರೆದರು. ಇಂದಿಗೂ ತಿರುಪತಿಯಲ್ಲಿ ಬಳಕೆಯಲ್ಲಿರುವ ಎಷ್ಟೋ ಧಾರ್ಮಿಕ ಆಚರಣೆಗ ಳನ್ನು ಪ್ರಾರಂಭಿಸಲು ಕಾರಣರಾದವರು ಅನ್ನಮಾ ಚಾರ್ಯರೇ. ಸರಳ ಸಂಸ್ಕೃತ ಸ್ವಚ್ಛ ತೆಲುಗಿನ ಉಭಯ ಭಾಷಾಪಂಡಿತರು. ತಮ್ಮ ಗುರು ಶಠ ಕೋಪ ಯತಿಯಿಂದ ಉಪದೇಶಗಳನ್ನು ಪಡೆದ ರೆಂದೂ ಸಂಪೂರ್ಣವಾಗಿ ಆಧ್ಯಾತ್ಮಿಕ ಜೀವನದಲ್ಲಿ ಮುಳುಗಿದವರೆಂದೂ ತಿಳಿದುಬರುತ್ತೆ. ತಿರುಪ ತಿಯ ವೆಂಕಟೇಶ್ವರ ದೇವರು ಅನ್ನಮಾಚಾರ್ಯರು ಹಾಡುತ್ತಿದ್ದರೆ ಅದಕ್ಕೆ ತಕ್ಕನಾಗಿ ನೃತ್ಯಮಾಡುತ್ತಿದ್ದ ರೆಂದು ಅವರ ಕೆಲವು ಸಮಕಾಲೀನ ಅಭಿಮಾನಿ ಗಳ ನಂಬಿಕೆ. ಶ್ರೀ ವೆಂಕಟೇಶ್ವರನಲ್ಲಿದ್ದ ಅಪಾರ ಭಕ್ತಿಯಿಂದಾಗಿ ಈತ ವೈಷ್ಣವ ಮತವನ್ನು ಸ್ವೀಕರಿ ಸಿದರು. ಇವರು ಸುಮಾರು ೩೨೦೦೦ ಕೀರ್ತನೆಗ ಳನ್ನು ಶ್ರೀ ವೆಂಕಟೇಶ್ವರನ ಮೇಲೆ ರಚಿಸಿ, ಹಾಡಿದ ರೆಂತೆ ತಿಳಿದುಬರುತ್ತೆ. ಕೀರ್ತನೆಗಳನ್ನು ದಿನಕ್ಕೊಂ ದರಂತೆ ರಚಿಸುತ್ತಿದ್ದರೆಂದು ಹೇಳುತ್ತಾರೆ. ವಾಗ್ಗೇ ಯಕಾರರೂ, ವಿದ್ವಾಂಸರೂ ಆದ ಅಮರಜೀವಿ ಅನ್ನಮಾಚಾರ್ಯರು ನಂದವರೀಕರಲ್ಲಿ ಧ್ರುವತಾ ರೆಯಂತೆ ಕಂಗೊಳಿಸಿದ್ದಾರೆ. ಅವರ ಹೆಸರು ಶಾಶ್ವತ ವಾಗಿ ಉಳಿಯುವಂತೆ ತಿರುಪತಿ ತಿರುಮಲ ದೇವ ಸ್ಥಾನದವರು ಮಾಡಿರುವುದರಿಂದ ನಂದವರೀಕರು ತಿರುಪತಿ ತಿರುಮಲ ದೇವಸ್ಥಾನದವರಿಗೆ ಅತ್ಯಂತ. ಕೃತಜ್ಞರೂ ಅಭಾರಿಗಳೂ ಆಗಿರುತ್ತಾರೆ. ತಿರು ಪತಿ ತಿರುಮಲೆ ದೇವಸ್ಥಾನದ ಪೇಷ್ಕಾರರಾದ ಶ್ರೀ ಸಾಧು ಸುಬ್ರಹ್ಮಣ್ಯಶಾಸ್ತ್ರಿ ಶ್ರೀ ವೇಟೂರಿ ಪ್ರಭಾಕ ರಶಾಸ್ತ್ರಿ ಸಂಸ್ಥೆಯ ರಾಳ್ಳಪಲ್ಲಿ ಅನಂತ ಕೃಷ್ಣಶರ್ಮ ಗೌರಿಪೆದ್ದಿ ರಾಮಸುಬ್ಬಶರ್ಮ ಇವರು ತಾಳ್ಳಪಾಕ ವಾರಿ ಅರೆದಲ್ಲಿ ಅಡಗಿಸಿಟ್ಟಿದ್ದ ಅನ್ನಮಾಚಾರ್ಯರ ಸಂಕೀರ್ತನೆಗಳ ತಾಮ್ರಪಟ ಬರಹಗಳು ಬೆಳಕಿಗೆ ಬರುವಲ್ಲಿ ಅತ್ಯಂತ ಶ್ರಮಿಸಿದ್ದಾರೆ. ಈ ಕೋಣೆ ತಿರುಮಲೆ ದೇವಸ್ಥಾನದ ಆವರಣದಲ್ಲಿ ಈಗಲೂ ಇದೆ. ಈ ನಾಲ್ಕರು ಮಹನೀಯರ ಪ್ರಯತ್ನಗಳು ಇಲ್ಲದಿದ್ದರೆ ಅನ್ನಮಾಚಾರ್ಯರ ಸಂಕೀರ್ತನೆಗಳು ಬೆಳಕಿಗೆ ಬರಲು ಮತ್ತು ಇಂಥ ಉತ್ಕೃಷ್ಟಸ್ಥಾನವನ್ನು ಗಳಿಸಲು ಸಾಧ್ಯವಾಗುತ್ತಿರಲಿಲ್ಲ. ತಿರುಮಲೆಯಲ್ಲಿ ಸಲ್ಲಿಸುವ ವಿವಿಧ ಸೇವೆಗಳಲ್ಲಿ ಮುಖ್ಯವಾಗಿ ಸುಪ್ರ ಭಾತ, ಕಲ್ಯಾಣೋತ್ಸವ, ಮತ್ತು ಪವಳಿಂಪುಸೇವೆಗ ಳಲ್ಲಿ ಇಂದಿಗೂ ಭಾಗವಹಿಸುತ್ತಿದ್ದಾರೆ.

ವಲಸೆ ಬಂದ ಇನ್ನೊಬ್ಬ ಪ್ರಮುಖರೆಂದರೆ ತರಿ ಗೊಂಡ ವೆಂಗಮಾಂಬ -- ಕಾಲ ಸುಮಾರು ಕ್ರಿ.ಶ. ೧೭೯೦--೧೮೫೦ ಇವರು ನಂದವರೀಕಕಾ ನಾಲ ಕುಟುಂಬದ ಕೃಷ್ಣಾರ್ಯ ಮತ್ತು ಮಂಗ ಮಾಂಬ ದಂಪತಿಗಳ ಮಗಳು. ಈಕೆಗೆ ಚಿಕ್ಕತನ ದಲ್ಲೆ ಮದುವೆಯಾಗಿತ್ತು. ದುರಾದೃಷ್ಟವಶಾತ್ ಆಕೆಗೆ ತೀರಚಿಕ್ಕವಯಸ್ಸಿನಲ್ಲಿಯೇ ವೈಧವ್ಯ ಉಂಟಾ ಯಿತು. ಕಾವ್ಯಪದ್ಧತಿಯಲ್ಲಿ ಪ್ರೌಢಿಮೆಯನ್ನು ಸಂಪಾ ದಿಸಿದ ಏಕೈಕ ಕವಯಿತ್ರಿ. ಚಿತ್ತೂರು ಜಿಲ್ಲೆಯ ತರಿಗೊಂಡ ಲಕ್ಷ್ಮೀ ನರಸಿಂಹಸ್ವಾಮಿ ಮತ್ತು ತಿರು ಮಲ ವೆಂಕಟೇಶ್ವರನ ಉಗ್ರಭಕ್ತಳು. ಸುಬ್ರಹ್ಮಣ್ಯ ಗುರುವಿನ ಪ್ರಭಾವದಿಂದ ಯೋಗಿನಿ ಯಾದ ಳೆಂದೂ, ಈಕೆಯು ಮುಕ್ತಿ ಪಡೆಯುವುದಕ್ಕೆ ಮುನ್ನ ಏಡು ಕೊಂಡಲನ ದರ್ಶನವಾಯಿತೆಂದು ತಿಳಿದು ಬರುತ್ತೆ.

ಮೇಲೆ ತಿಳಿಸಿದ ಪ್ರಖ್ಯಾತ ಕವಿಗಳ ಜೊತೆಗೆ ಇನ್ನೂ ಕೆಲವು ನಂದವರೀಕ ಕವಿಗಳು ಇದ್ದಾರೆ. ಮುದಿಯಂ ವೆಂಕಟರಮಣ ಕವಿ (ಕ್ರಿ ಶ. ೧೫೭೦ - ೧೬೩೦) ಗಣಪವರಂ ವೆಂಕಟ ಕವಿ (ಕ್ರಿ.ಶ. ೧೬೩೦-೧೬೮೦) ನಂದವರಂ ಸಿಂಗನ್ನ ತೋಲಂ ಸೀತಾರಾಮಕವಿ, ದೋಧಿಚರ್ಲ ಸುಬ್ಬ ಕವಿ ಮುಂತಾದವರು ಆ ಕಾಲದಲ್ಲಿ ಬೇರೆ ಬೇರೆ ಸ್ಥಳಗಳಿಗೆ ವಲಸೆ ಹೋದವರು. ಈ ಕವಿಗಳ ಸಾಲಿ ನಲ್ಲಿ ನಿಲ್ಲುವ ಪ್ರಖ್ಯಾತ ಕವಿಗಳಲ್ಲಿ ಇತ್ತೀಚಿನವರೆಂ ದರೆ ಸಾನಿಪಲ್ಲಿ ಕವಿಯೋಗಿ ಗುಮ್ಮರಾಜು ರಾಮ ಕವಿ ಮತ್ತು ಬೆಂಗಳೂರಿನ ಆಚಾರ್ಯ ವಿದ್ವಾನ್ ಗೊಂಟೂರು ವೆಂಕಟಾಚಲಶರ್ಮ. ತೀರ ಇತ್ತೀ ಚಿನವರೆವಿಗೆ ಕರ್ನೂಲ್, ಕಡಪ, ಅನಂತಪುರ, ರಾಯಲಸೀಮ, ಚಿತ್ತೂರು ಜಿಲ್ಲೆಗಳು ಕಂಗುಂದಿ ವಿಭಾಗ ಮತ್ತು ಕೋಲಾರ ಜಿಲ್ಲೆಯಲ್ಲಿನ ಹೆಚ್ಚು ಕಡಿಮೆ ಎಲ್ಲಾ ಗ್ರಾಮಗಳ ಕರಣಂಗಳು (ಶಾನು ಭೋಗರು) ನಂದವರೀಕರೆ ಆಗಿದ್ದರು. ಒಂದು ಮೂಲದಿಂದ ತಿಳಿದುಬಂದ ಹಾಗೆ ನಂದವರೀಕ ಚಿಕ್ಕಣ್ಣ ಎಂಬುವರು ಕೃಷ್ಣದೇವರಾಯನ ವಿಜ ಯನಗರ ಸಾಮ್ರಾಜ್ಯದಲ್ಲಿ ಅನಂತಪುರ ಪ್ರದೇಶ ದಲ್ಲಿ ಸಾರ್ವಜನಿಕ ಕಾಮಗಾರಿಗಳ ಅಧಿಕಾರಿಯಾ ಗಿದ್ದರು. ಬುಕ್ಕರಾಯ ಸಮುದ್ರ ಎಂಬ ಕೆರೆಯನ್ನು ಆಳವಾಗಿ ತೋಡಿ ವಿಸ್ತರಿಸುವುದಕ್ಕೆ ಇವರೇ ಕಾರ ಣರಾಗಿದ್ದರಂತೆ. ಈ ಕೆರೆಯ ಆಳ, ವಿಸ್ತಾರದ ಕಾರಣವಾಗಿ ಸಾಕಷ್ಟು ನೀರು ಇದ್ದು ಆ ಪ್ರದೇಶ ದಲ್ಲಿ ಬಂದ ಬರಗಾಲದುರ್ಭಿಕ್ಷಗಳ ಕಾಲದಲ್ಲಿ ಜನರ ತೊಂದರೆಗಳು ಸ್ವಲ್ಪ ಮಟ್ಟಿಗೆ ನಿವಾರಣೆ ಯಾದಂತೆ ತೋರುತ್ತದೆ. ಬುಕ್ಕರಾಯ ಸಮುದ್ರ ಇಂದಿಗೂ ಇದೆ. ಇಂತಹ ಸೇವೆಯಿಂದ ತೃಪ್ತಿ ಗೊಂಡ ಕೃಷ್ಣದೇವರಾಯ ಚಿಕ್ಕಣ್ಣನವರಿಗೆ "ಒಡೆ ಯರು" ಎಂಬ ಬಿರುದನ್ನು ಕೊಟ್ಟಿದ್ದಲ್ಲದೆ ಯಾವ ರೂಪದಲ್ಲಿ ಏನು ಬೇಕೋ ಕೇಳಿಕೋ ಎನ್ನುವ ಆಯ್ಕೆಯನ್ನು ಮುಂದಿಟ್ಟರು. ನಿಸ್ಸಂತಾನರಾದ ಚಿಕ್ಕಣ್ಣ ಇತರ ನಂದವರೀಕರು ವಲಸೆ ಬಂದು ಪುನ ರ್ವಸತಿಗಾಗಿ ಪಡುತ್ತಿದ್ದ ಕಷ್ಟಕಾರ್ಪಣ್ಯಗಳ ಅರಿವು ಇತ್ತು. ನಿಸ್ವಾರ್ಥ ಚಿಕ್ಕಣ್ಣರಾಯನ ವಿಸ್ತರಿತ ಸಂಸ್ಥಾ ನದಲ್ಲಿನ ಎಲ್ಲ "ಕರಣಂ"ಗಳ ಖಾಲಿ ಹುದ್ದೆಗಳನ್ನು ನಂದವರೀಕರಿಗಾಗಿ ಮೀಸಲಿಡುವಂತೆ ಕೋರಿಕೆ ಸಲ್ಲಿಸಿದರು. ಈ ಕೋರಿಕೆ ಮೇರೆಗೆ ನಂದವರೀಕ ರೆಲ್ಲ ಏಕಕಾಲದಲ್ಲಿ "ಕರಣಂ"ಗಳಾದಂತೆ ತೋರು ತ್ತದೆ. ಇಂತಹ ಪವಿತ್ರಾತ್ಮನಾದ ಚಿಕ್ಕಣ್ಣ ಎಲ್ಲಾ ಕಾಲಕ್ಕು ನಿಸ್ವಾರ್ಥ ನಂದವರೀಕರೆಂದು ನೆನಪಲ್ಲಿಡ ಬೇಕಾಗುತ್ತದೆ. ಈ ಅಭಿಪ್ರಾಯ ಚಾರಿತ್ರಿಕವಾಗಿ, ಮತ್ತಿತರ ರೀತಿಯಲ್ಲಿ ಸಮಂಜಸ ಎಂದು ತೋರು ತ್ತದೆ.

"ಸಂಗ್ರಹ"



# ರಾಮಾನುಜರು ಹೇಳಿದ ಕಥೆ

---'ರಘುಸುತ'.

ಶ್ರೀಮನ್ನಾರಾಯಣನ ಪರತತ್ವದ ಬಗ್ಗೆ ವಿವರಣೆ ನೀಡುತ್ತಿದ್ದ ಯತಿರಾಜ ರಾಮಾನುಜರಿಗೆ ಹೆಚ್ಚು ಸಮಯ ಪ್ರವಚನ ಮಾಡುವುದಕ್ಕಾಗದೆ ಒಂದು ನಿಮಿಷ ಸುಮ್ಮನಾದರು. ಸಾಲಿಗ್ರಾಮದಿಂದ ಬಂದಿದ್ದ ಶೋಮಾಶಿಯಾಂಡಾನ್ ಎಂಬ ಬಿರುದಾಂಕಿತರಾದ ರಾಮಮಿಶ್ರರ ಮುಖವನ್ನು ನೋಡಿದರು. ಶ್ರೀ ಭಾಷ್ಯಾದಿಗಳ ಬಗ್ಗೆ ಯತಿರಾಜರ ಕೃತಿಗಳ ಬಗ್ಗೆ ಅನೇಕ ಕಡೆಗಳಲ್ಲಿ ಪ್ರವಚನ ಮಾಡಿ, ಗುರುಗಳ ಭೇಟಿಗೆಂದು ಬಂದಿದ್ದ ರಾಮಮಿಶ್ರರಿಗೆ ಗುರುಗಳೇಕೆ ಇದ್ದಕ್ಕಿದ್ದಂತೆ ಪ್ರವಚನ ನಿಲ್ಲಿಸಿದರು ಎಂದು ಆಶ್ಚರ್ಯ.

ಕೆಲವು ಕ್ಷಣಗಳ ನಂತರ ಎಂಬಾರ್, ಪರಾಶರ ಇತ್ಯಾದಿ ಶಿಷ್ಯರುಗಳನ್ನೆಲ್ಲ ನೋಡಿ ನಸುನಕ್ಕರು. ಅವರ ಈ ದೈವೀಕ ನಗುವೆ ಎಲ್ಲರನ್ನೂ ಅವರೆಡೆಗೆ ಆಕರ್ಷಿಸಿದ್ದುದು. ಆಚಾರ್ಯರನ್ನು ದರ್ಶಿಸಿದವರಿಗೆಲ್ಲ ಅವರ ಈ ನಗು ಚಿರಪರಿಚಿತವಾದಂತನ್ನಿಸುತ್ತಿತ್ತು. ಮಗುವಿನ ಮುಗ್ಧನಗುವೆ, ಶ್ರೀರಂಗನಾಥರ ಮುಖದಲ್ಲಿನ ಪಾವಿತ್ರ್ಯ ನಗುವೆ -- ಯಾವುದೆಂದು ಅವರಿಗೆ ಹೊಳೆಯುತ್ತಿರಲಿಲ್ಲ. ಆದರೂ ಅದು ಅವರಿಗೆ ಚಿರಪರಿಚಿತವಾದದ್ದು.

"ಒಂದು ಕಥೆ ಹೇಳಲಾ?" ಎಂದರು ಯತಿರಾಜರು.

ಎಲ್ಲರಿಗೂ ಆಶ್ಚರ್ಯ. ಇದ್ದಕ್ಕಿದ್ದಂತೆ ಕಾವೇರಿಯಲ್ಲಿ ಪ್ರವಾಹ ಬಂದಂತಾಯಿತು. ಶ್ರೀ ವೈಷ್ಣವ ಸಿದ್ಧಾಂತಗಳ ಬಗ್ಗೆ, ಶರಣಾಗತಿ ಪ್ರಪತ್ತಿ ಬಗ್ಗೆ ನಿರರ್ಗಳವಾಗಿ ಪ್ರವಚನ ಮಾಡುತ್ತಿದ್ದ ಆಚಾರ್ಯರು ಇಂದಕೆ ಮಕ್ಕಳಿಗೆ ಹೇಳುವಂತೆ ಕಥೆ ಹೇಳುವೆ ಎನ್ನುವರಲ್ಲ. "ನಾವು ಮಕ್ಕಳೇ ಇರಬಹುದಲ್ಲವೆ; ನಾವು ತಿಳಿದಿರುವುದೇ ಬಹಳ ಕಡಿಮೆ, ಅದರಿಂದಲೇ ನಮ್ಮನ್ನು ಮಕ್ಕಳೆಂದು ಭಾವಿಸಿ ಹೇಳುತ್ತಿರಬಹುದು. ಇದೂ ಒಂದು ರೀತಿ ಉಪದೇಶವಲ್ಲವೆ?" ಎಂದುಕೊಂಡ ಶಿಷ್ಯರೆಲ್ಲ ಆಚಾರ್ಯರ ಕಡೆ ಕುತೂಹಲದಿಂದ ನೋಡಿದರು. ಆಚಾರ್ಯರು ಹೇಳುವ ವಿಷಯ ತಮಗೆ ಬೇಕು -- ಎನ್ನುವ ಅಭಿಪ್ರಾಯದೊಂದಿಗೆ. ಆಚಾರ್ಯರು ಮುಂದುವರಿಸಿದರು--

"ನಿಮ್ಮ ಕುತೂಹಲ ಅರ್ಥವಾಯಿತು. ಇದು ಯಾವುದೇ ರೀತಿಯ ಭಗವದ್ವಿಷಯಕ್ಕೆ ಸಂಬಂಧಪಟ್ಟಿಲ್ಲ ಎಂದು ಹೊರನೋಟಕ್ಕೆ ಕಂಡರೂ, ಭಗವಂತನ ವಿಷಯವನ್ನು ತಪ್ಪದೇ ಒಳಗೊಂಡಿದೆ. ಇದೊಬ್ಬ ವಿಷ್ಣುಭಕ್ತನ ಕಥೆ. ಈತನು ತನ್ನ ಸಾತ್ವಿಕ ಗುಣದಿಂದ, ಮಹಾವಿಷ್ಣುವನ್ನೇ ಹೆದರಿಸಿದ್ದ."

"ಹಾಂ..... ಹೌದೇ? ಆಶ್ಚರ್ಯ!" ಎಂದು ಎಲ್ಲರೂ ಅಚ್ಚರಿಗೊಂಡರು ಶಿಷ್ಯರೆಲ್ಲ.

"ಹೌದು, ಆಶ್ಚರ್ಯಪಡಬೇಕಾಗಿಲ್ಲ. ಕಥೆ ಕೇಳಿ. ಇದು ವಿಷ್ಣು ಸಹಸ್ರನಾಮದ ಪ್ರಭಾವವನ್ನು ವಿವರಿಸುವಂತಹುದು......."

ಬಹಳ ಹಿಂದೆ ಅನಂತಾರ್ಯ ಎನ್ನುವ ಓರ್ವ ವಿಷ್ಣುಭಕ್ತನಿದ್ದ. ಬೆಳಗಾಗೆದ್ದು, ಕಾವೇರಿಗೆ ಹೋಗಿ ಸ್ನಾನ ಮಾಡಿ ಬಂದು, ತಿರುಮಣ್, ಊರ್ಧ್ವಪುಂಡ್ರಗಳನ್ನು ಧರಿಸಿ, ತುಂಬಾ ಭಕ್ತಿಯಿಂದ ವಿಷ್ಣು ಸಹಸ್ರನಾಮದ ಸ್ತೋತ್ರಮಾಡುವ. ತುಂಬಾ ಶ್ರದ್ಧೆಯಿಂದ, ತಪಸ್ಸಿನ ತರಹ ಮಹಾವಿಷ್ಣುವಿನ ಸ್ತೋತ್ರ ಮಾಡುವ. ಓರ್ವ ಋಷಿಯಂತೆಯೆ ಇದ್ದ. ಸದ್ಬ್ರಾಹ್ಮಣ ನಾದುದರಿಂದ ಅನಂತಾರ್ಯನು ಭಿಕ್ಷಾವೃತ್ತಿಯಿಂದಲೇ ಜೀವನ ನಿರ್ವಹಿಸುತ್ತಿದ್ದ.

ಈತನ ಪತ್ನಿ ಮಹಾಲಕ್ಷ್ಮಿ. ತುಂಬಾ ಸಹನೆಯಿಂದ ಸಂಸಾರಮಾಡುವ ಸಾಧ್ವೀಮಣಿ. ಗಂಡ ಭಿಕ್ಷದ ಮುಖಾಂತರ ತಂದ ಅಲ್ಪಸ್ವಲ್ಪ ಕಾಳು ಧಾನ್ಯಗಳನ್ನು ತುಂಬಾ ಎಚ್ಚರಿಕೆಯಿಂದ ಶುಭ್ರಮಾಡಿ, ಸಂಸಾರಕ್ಕೆ ಉಪಯೋಗಿಸಿಕೊಳ್ಳುವಳು.

ಭಗವದ್ಭಕ್ತನೆನಿಸಿದ್ದ ಅನಂತಾರ್ಯನಿಗೆ ವಿಷ್ಣು ಸಹಸ್ರನಾಮ ಎಂದರೆ ಅನನ್ಯ ಶ್ರದ್ಧೆ. ಅದನ್ನು ಪಠಿಸಿ, ಮಹಾವಿಷ್ಣುವನ್ನು ಧ್ಯಾನಿಸದೆ ಅವನು ಭಿಕ್ಷಾಟನೆಗೆ ಹೋಗುತ್ತಿರಲಿಲ್ಲ. ಅವನ ಭಗವದಾರಾಧನೆಯನ್ನು ಭಗವಂತನೂ ಮೆಚ್ಚಿಕೊಂಡಿದ್ದಿರಬಹುದು.

ದುರದೃಷ್ಟವಶಾತ್ ಆ ವರ್ಷ ನಾಡಿನಾದ್ಯಂತ ಬರಗಾಲ ಹರಡಿತು. ಪ್ರಜೆಗಳೆಲ್ಲ ಥರ ಥರ ನಡುಗಿ ಹೋದರು. ಮಳೆ ಬೆಳೆಗಳಿಲ್ಲದೆ ಜನರೆಲ್ಲ ಹಾಹಾಕಾರ ಮಾಡತೊಡಗಿದರು. ಕಷ್ಟಪಟ್ಟು ದುಡಿಯುವ ರೈತರಿಗೇ ಒಂದು ಹಿಡಿಕಾಳು ದೊರೆಯುವುದು ಕಷ್ಟವಾಗಿರುವಾಗ, ಭಿಕ್ಷೆವೆತ್ತುವವರಿಗೆ ಧಾನ್ಯ ನೀಡುವವರು ಯಾರು?

ಇದರ ಪರಿಣಾಮವಾಗಿ ಮನೆಯಲ್ಲಿ ಒಲೆ ಹಚ್ಚಲಿಲ್ಲ. ಇದ್ದ ಮಕ್ಕಳಿಗೆ ಹಿಟ್ಟೊ, ಬೇರೊ, ಗೆಣಸನ್ನೊ ಬೇಯಿಸಿ ನೀಡಿದ್ದಾಯಿತು. ಬಹಳ ಕಷ್ಟದಿಂದ ತುಟಿಯೆರಡು ಮಾಡದೆ ಮಹಾಲಕ್ಷ್ಮಿಯು ನಿಜ ಅರ್ಥದಲ್ಲಿ ಮಹಾಲಕ್ಷ್ಮಿಯೆ ಆಗಿ ಮನೆಯ ಮರ್ಯಾದೆಯನ್ನು ಕಾಪಾಡಿದಳು.

ಆದರೆ ಆಕೆಯಿಂದಲೂ ಇನ್ನು ಮುಂದೆ ಸಾಧ್ಯವಿಲ್ಲ, ಸಂಸಾರ ನಡೆಸುವುದು ಕಷ್ಟ ಎಂದೆನ್ನಿಸಿತು. ಮಕ್ಕಳ ಹಸಿವನ್ನು ಆಕೆಯೂ ನೋಡಲಾರದಾದಳು.

ಅಂದು ಎಂದಿನಂತೆ ಭಿಕ್ಷಾ ಪಾತ್ರೆಯನ್ನು ಹೊಳೆಯುವಂತೆ ಶುಭ್ರವಾಗಿ ತೊಳೆದು, ತಿರುವಾರಾಧನೆಯನ್ನು ಮುಗಿಸಿಕೊಂಡು, ವಿಷ್ಣುಸಹಸ್ರನಾಮ ಜಪದ ನಂತರ ಭಿಕ್ಷಕ್ಕೆ ಹೊರಡಲು ಅನಂತಾರ್ಯನು ಸಿದ್ಧನಾದನು.



## ಸಪ್ತಗಿರಿ ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ರ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೋದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

ಇದನ್ನು ಗಮನಿಸಿದ ಮಹಾಲಕ್ಷ್ಮಿಯು ಗಂಡನಿಗೆ ಹೇಳಿದಳು.

"ಏನೂಂದ್ರೆ! ಈವತ್ತಾದರೂ ಒಂದಷ್ಟು ಕಾಳೋಗೀಳೊ ತರುವಿರೊ ಇಲ್ಲವೊ? ನೀವು ತರಲಿಲ್ಲವೆಂದರೆ ಮಕ್ಕಳು ಹಸಿವಿನಿಂದ ಒದ್ದಾಡಿ ಸಾಯುವುದಂತೂ ಖಂಡಿತ."

ಇನ್ನು ತಡೆದುಕೊಳ್ಳಲು ಆಗುವುದಿಲ್ಲ ಎನ್ನುವ ಭಾವ ಹೊರಹೊಮ್ಮಿದ್ದರಿಂದಲೇ ಈ ರೀತಿ ದೂರಿದಳು.

"ನನ್ನ ಕೈನಲ್ಲಿ ಏನಿದೆ ಮಹಾಲಕ್ಷ್ಮಿ? ಎಲ್ಲ ಆ ಶ್ರೀಮನ್ನಾರಾಯಣನ ಕೃಪೆ. ವಿಧಿ ನಿರ್ಣಯ ಹೇಗಿದ್ದರೆ ಹಾಗೆ ನಡೆಯುತ್ತದೆ. ಈ ವೈಕುಂಠಪತಿಗೆ ನಮ್ಮ ಮೇಲೆ ದಯೆ ಇಲ್ಲವೊ ಏನೊ?"

ಎಂದ ಅನಂತಾರ್ಯ ನಿರ್ಮೋಹದಿಂದ.

ಇಷ್ಟು ದಿನವೂ ಮಹಾಲಕ್ಷ್ಮೀಗೆ ಕೋಪ ಬಂದಿರಲಿಲ್ಲ. ಆದರೆ ಈಗ ಸಹಿಸಿಕೊಳ್ಳುವುದಕ್ಕೆ ಆಗದೆ, ಸಿಡಿದ ಅಗ್ನಿಪರ್ವತದಂತೆ ಹೇಳಿದಳು.

"ನೀವು ವಿಷ್ಣು ಭಕ್ತರು. ಇಷ್ಟು ವರ್ಷಗಳಿಂದ ಕಾಮಾ, ವಾಚಾ, ಮನಸಾ ಆ ಮಹಾವಿಷ್ಣುವನ್ನು ಸಹಸ್ರನಾಮಗಳಿಂದ ಸ್ತೋತ್ರ ಮಾಡುತ್ತಿರುವಿರಲ್ಲ; ಜಪತಪಾದಿಗಳಿಂದ ಆರಾಧನೆ ಮಾಡುತ್ತಿರುವಿರಲ್ಲ! ಇದರ ಫಲವೇನಾಯಿತು?"

"ದೇವಸ್ತುತಿಯನ್ನು ಪ್ರತಿಫಲಾಪೇಕ್ಷೆ ಇಲ್ಲದೆ ಮಾಡಬೇಕು ಮಹಾಲಕ್ಷ್ಮಿ!" ಸಮಾಧಾನದಿಂದ ಅನಂತಾರ್ಯ ಹೇಳಿದ.

"ಹೌದು, ನಾನೂ ಒಪ್ಪಿವೆ. ಆದರೆ ಪ್ರಾಣರಕ್ಷಣೆಗಾದರೂ, ಅತ್ಯಲ್ಪ ಆಹಾರ ಸೇವನೆಯಾದರೂ ಅಗತ್ಯವಿದೆಯೊ? ಇಲ್ಲವೊ?"

ಇದೆ ಎನ್ನುವಂತೆ ಅನಂತಾರ್ಯನು ತಲೆಯಾಡಿಸಿದ.

"ಅಂದರೆ ಅದರ ಅಗತ್ಯವಿದೆಯೆಂದಾಯಿತು..... ಇಷ್ಟು ವರ್ಷಗಳಿಂದ ನೀವು ಶ್ರೀ ಮಹಾವಿಷ್ಣುವನ್ನು ಸಹಸ್ರನಾಮಗಳಿಂದ ತದೇಕ ಚಿತ್ತದಿಂದ ಪೂಜಿಸುತ್ತಿರುವಿರಿ. ನಿಮ್ಮ ಈ ಭಕ್ತಿಭಾವವು ಅತ್ಯಂತ ಹಿರಿದಾದುದು ಎಂಬುದು ಸ್ವತಃ ಆ ಮಹಾವಿಷ್ಣುವಿಗೆ ಗೊತ್ತು. ಹೌದೊ ಅಲ್ಲವೊ?"

"ಹೌದು."

"ಹಾಗಿರುವಾಗ ಆತನ ಭಕ್ತನಾದ ನೀವು ಇಷ್ಟೊಂದು ನೋವುಗಳನ್ನು ಅನುಭವಿಸುತ್ತಿದ್ದರೆ ಅದನ್ನು ಆತ ನೋಡುತ್ತಾ ಕುಳಿತಿರುವುದು ಅಷ್ಟು ಚೆನ್ನಾಗಿ ನನಗೆ ಕಾಣಿಸುವುದಿಲ್ಲ. ಆತನನ್ನು 'ಪ್ರಾಣದ' ನೆಂದೂ 'ಪ್ರಾಣ'ನೆಂದೂ, ಒಂದಲ್ಲ ಎರಡು ಶ್ಲೋಕಗಳಲ್ಲಿ ಸಹಸ್ರ ನಾಮದಲ್ಲಿ ಹೇಳುವಿರಿ. ಎಂಟನೇ ಹಾಗೂ ನಲವತ್ತು ನಾಲ್ಕನೇ ಶ್ಲೋಕಗಳಲ್ಲಿ ಎರಡೆರಡು ಸಲ ಈ ಪದವನ್ನು ಹೇಳಿ, ಆತನನ್ನು ಸ್ತೋತ್ರ ಗೈದರೂ, ಈ ಹೆಸರನ್ನು ಆತ ಸಾರ್ಥಕಪಡಿಸಿಕೊಂಡಿದ್ದಾನೇನು? ನಿಮ್ಮ ನಮ್ಮ ಅರ್ಥದಲ್ಲಿ ಆತನು ನಮಗೆ ಪ್ರಾಣದನಾಗಿದ್ದಾನೇನು? ತನ್ನ ಭಕ್ತರ ನೋವನ್ನೇ ಪರಿಹರಿಸಲಾರದವನು. ಇನ್ನು ಈ ಜಗತ್ತನ್ನು ಹೇಗೆ ಪರಿಪಾಲಿಸಬಲ್ಲ; ಅದನ್ನು ಹೇಗೆ ರಕ್ಷಿಸಬಲ್ಲ? ನೀವೇ ಹೇಳಿ!"

ಸಂಸಾರದ ಕಷ್ಟಗಳನ್ನು ಎದುರಿಸುವಲ್ಲಿ, ಅವಳಲ್ಲಿ ಪರಮಾತ್ಮನ ಮೇಲಿನ ಭಕ್ತಿ ನಶಿಸಿದೆಯೆಂದು ಅರ್ಥಮಾಡಿಕೊಂಡ. ಮಹಾವಿಷ್ಣುವಿನ ಬಗ್ಗೆ ತನ್ನ ಪತ್ನಿಯು ಕೋಪ ತೋರಿದುದರಲ್ಲಿ ತಪ್ಪೇನೂ ಇಲ್ಲ ಎಂದೆನ್ನಿಸಿತು ಅನಂತಾರ್ಯನಿಗೆ.

ಅವಳು ಹೇಳುವುದೂ ನಿಜ ಅಲ್ಲವೆ?

'ಪ್ರಾಣದಃ' ಎಂದರೆ ಈಶಾನನಾದ ಭಗವಂತನು ಸಹಜವಾಗಿಯೇ ಸಮಸ್ತವನ್ನೂ ಆಳುವವನು. ಆತನೇ ಎಲ್ಲವಕ್ಕೂ ಆಧಾರ. ಆತನೇ ನಿತ್ಯಸೂರಿಗಳಿಗೆ ಐಶ್ವರ್ಯನು, ಸದಾ ಅವರಿಗೆ ತನ್ನ ದರ್ಶನ ಸೌಭಾಗ್ಯವನ್ನಿತ್ತು ತನ್ನ ಸೇವಾಕೈಂಕರ್ಯಾಚರಣೆಗಳಿಗೆ ಅನುಕೂಲವಾದ ಬಲವನ್ನು ಅವರಿಗೆ ಕೊಡುವವನು, ಅವರುಗಳಿಗೆ ಪ್ರಾಣ ಸಮಾನನು ಎಂದರ್ಥ. - 'ಸದೈವಃ ಪ್ರಾಣ ಆವಿಶತಿ' ಎನ್ನುವ ಬೃಹದಾರಣ್ಯಕದ ಸೂಕ್ತಿಯಂತೆ ಸೂರಿಗಳಿಗೆ ತನ್ನ ಕೈಂಕರ್ಯ ಮಾಡುವ ಸಾಮರ್ಥ್ಯವನ್ನು ದಯಪಾಲಿಸುವವನು ಎಂದರ್ಥ.

ಹೀಗೆ ಮಾಡುವುದು ಭಕ್ತ ಪರಾಧೀನನಾದ ಆ ಪರಮಾತ್ಮನ ಕರ್ತವ್ಯವಲ್ಲವೆ? ದೇವತೆಗಳ -- ನಿತ್ಯ ಸೂರಿಗಳ ಪ್ರಾಣಪ್ರದನಾದ ಆ ಭಗವಂತನು, ಭಕ್ತನ ಸಮಸ್ತವನ್ನು ರಕ್ಷಿಸಬೇಕಲ್ಲವೆ? ಈ ಗುಣಗಳಿಗೆ ಅವನು ಅಧಿಕರಣನಾಗುವುದರಿಂದ ಪರಮಾತ್ಮನು 'ಪ್ರಾಣ' ಶಬ್ದವಾಚ್ಯನಾಗುತ್ತಾನೆ. ಈ ರೀತಿಯಾಗಿ ಸೂರಿಜನಗಳಿಗೂ ಪರಬ್ರಹ್ಮನಿಗೂ ಇರುವ ಸಂಬಂಧವನ್ನು ಬಲಪಡಿಸುವ ಪ್ರಮಾಣವಾಗುತ್ತದೆ. ಪರಮಾತ್ಮನು ಹೀಗೆ ವರ್ತಿಸಿದಾಗ ನಿತ್ಯಸೂರಿಗಳು ಅಮೃತನಾದ, ಪ್ರಾಣನಾದ ಅವನನ್ನು ಪ್ರವೇಶಿಸುವರು. ಆತನು ಪ್ರಾಣದಂತೆ ಪ್ರೇಮಾಸ್ಪದನು. ಆತನು ಸರ್ವವಿಧ ಭೋಗ್ಯಭೂತನು.

ಹಾಗಿದ್ದಲ್ಲಿ ಆತನು ತನಗೆ 'ಮನೋಮಯಃ ಪ್ರಾಣ ಶರೀರೋಭಾರೂಪ ಸ್ಸತ್ಯ ಸಂಕಲ್ಪಃ' (ಶುದ್ಧ

ಏನಸ್ಸಿನಿಂದ ಗ್ರಾಹ್ಯನಾದವನೂ, ಸತ್ಯಸಂಕಲ್ಪನೂ, ಪ್ರಾಣವನ್ನೇ ಶರೀರವಾಗಿ ಉಳ್ಳವನೂ, ಜ್ಯೋತಿ ರೂಪನೂ) ನಾದನೇನು? ಛಾಂದೋಗ್ಯೋಪ ನಿಷತ್‌ನ ಸೂತ್ರದಂತೆ.

ಅಥೋಪಕರಣಂ ದಿವ್ಯಂ
ಪಂಚಶಕ್ತ್ಯುಪ ಲಕ್ಷಿತಂ,
ಕಾಲಜ್ಞಾನ ಕ್ರಿಯೇಚ್ಛಾಖ್ಯಂ
ಪ್ರಾಣ ಸಂಜ್ಞಂ ಮಹಾಮಹೀ
ಪ್ರಾಣ ಶಕ್ತೇಸ್ತು ಬಾಧ್ಯಾತ್ಮಂ
ಷಾಡ್ಗುಣ್ಯ ಮಖಿಲಂ ಹಿಯತ್
ಅಧಿದೈವತಮಬ್ಜಾಕ್ಷೋ
ವಾಸುದೇವಃ ಸನಾತನಃ

ಎಲ್ಲ ಜೀವಿಗಳನ್ನೂ ಜೀವಿಸುವಂತೆ ಮಾಡುತ್ತಿ ಲ್ಲವಲ್ಲ ಆ ಪರಮಾತ್ಮನು. ಅವನು ಪ್ರಾಣಗಳನ್ನು ಕೊಡುವವನು ಎನ್ನುವುದಾಗಲಿಲ್ಲವಲ್ಲ ನನ್ನ ವಿಚಾ ರದಲ್ಲಿ.

ಅದರಿಂದ ಆತನು ಸಹಸ್ರನಾಮದಲ್ಲಿರುವ 'ಪ್ರಾಣದಃ' ಎನ್ನುವ ಪದವನ್ನು ಹೊಂದಿರುವು ದಕ್ಕೆ ಅರ್ಹನಲ್ಲ ಎಂದು ತೀರ್ಮಾನಿಸಿದ ಅನಂತಾ ರ್ಯನು ಕೂಡಲೇ ಮನೆಯೊಳಗೆ ಹೋಗಿ, ಸಹ ಸ್ರನಾಮಾರ್ಚನೆಗೆ ಉಪಯೋಗಿಸುತ್ತಿದ್ದ ತಾಳೆಗರಿ ಗ್ರಂಥದಲ್ಲಿದ್ದ "ಪ್ರಾಣದಃ" ಎನ್ನುವ ಪದದ ಮೇಲೆ ಎತ್ತಿನ ಗಾಡಿಯ ಚಕ್ರದ ಮಧ್ಯದಲ್ಲಿದ್ದ ಕಪ್ಪಾಗಿದ್ದ ಕೀಲೆಣ್ಣೆಯನ್ನು ತಂದು, ಚೆನ್ನಾಗಿ ಹಚ್ಚಿದ. ಆ ಕಪ್ಪು ಒತ್ತಾಗಿ ಹಚ್ಚಿದ್ದರಿಂದ ಆ ಪದ ಸಹಸ್ರನಾಮಾವಳಿ ಯಲ್ಲಿ ಕಾಣಿಸದಂತಾಯಿತು.

ಇದರ ಪರಿಣಾಮ ಏನಾಯಿತು ಗೊತ್ತೆ ?

ಅಲ್ಲಿ ವೈಕುಂಠದಲ್ಲಿ ಶ್ರೀಮನ್ನಾರಾಯಣ ಹಾಗೂ ಶ್ರೀ ಲಕ್ಷ್ಮಿಯರು ಪಗಡೆಯಾಟ ವಾಡುತ್ತಿದ್ದರು.

ಏತಕ್ಕಾಗಿಯೊ ಲಕ್ಷ್ಮಿಯು ತಲೆಯೆತ್ತಿ ತನ್ನ ಸ್ವಾಮಿಯ ಕಡೆ ನೋಡಿದಳು. ನೋಡ ನೋಡುತ್ತ ಜೋರಾಗಿ ನಗತೊಡಗಿದಳು.

ಮೊದಲೇ ವಿಷ್ಣುವು ನೀಲಮೇಘಶ್ಯಾಮನು. ಅದರ ಮೇಲೆ ಅಚ್ಚಕಪ್ಪು ಬಣ್ಣದ ಲೇಪನ ಬೇರೆ. ಇದರ ಪರಿಣಾಮವಾಗಿ ಎಷ್ಟೋ ಸುಂದರವಾಗಿರ ಬೇಕಾಗಿದ್ದ ಶ್ರೀಮನ್ನಾರಾಯಣನ ಮುಖವು ಇಂದು ವಿಕಾರವಾಗಿ ಕಾಣಿಸಿತು ಶ್ರೀಲಕ್ಷ್ಮೀಗೆ.

ಈ ವಿಚಾರವನ್ನೆ ಆಕೆಯು ಶ್ರೀಮನ್ನಾರಾಯಣ ನಿಗೆ ಮನವಿ ಮಾಡಿಕೊಂಡಳು.

ಇವು ಯಾವುದರಿಂದಲೂ ವಿಚಲಿತನಾಗದ ಮಹಾವಿಷ್ಣುವು ತಲೆ ಬಾಗಿ ಹಾಲಗಡಲಿನಲ್ಲಿ ನನ್ನನ್ನು ತಾನು ನೋಡಿಕೊಂಡ. ಇದರಿಂದ ಸ್ವಾಮಿಗೆ ವಿಷಯವೇನೆಂಬುದು ಆ ಕೂಡಲೇ ಸ್ಪಷ್ಟ ವಾಗಿ ಅರ್ಥವಾಯಿತು.

ಆತ ತನ್ನಲ್ಲಿ ತಾನು ನಕ್ಕ.

ವಿಷಯ ಲಕ್ಷ್ಮೀಗೂ ಅರ್ಥವಾಯಿತು. ಎಷ್ಟೇ ಆಗಲಿ ಆಕೆ ಲೋಕಮಾತೆಯಲ್ಲವೆ!

ಅಂತೆಯೇ ನಗುತ್ತಾ ಆಕೆ ಹೇಳಿದಳು, "ಪಾಪ! ನಿಮ್ಮ ಭಕ್ತನು ಹಸಿವು ಬಾಯಾರಿಕೆಗಳಿಂದ ಒದ್ದಾ ಡುತ್ತಿದ್ದಾನೆ. ಸ್ವಲ್ಪವಾದರೂ ಆ ನಿಟ್ಟಿನಲ್ಲಿ ಅವನಿಗೆ ಸಹಾಯಮಾಡಬಾರದೆ?"

ಆಕೆಯ ದನಿಯಲ್ಲಿ ಅನುಕಂಪವೂ ಅಷ್ಟೊ ಇಷ್ಟೋ ಬಗ್ಗಿ ನೋಡುತ್ತಿತ್ತು.

ಮಹಾವಿಷ್ಣುವು ನಕ್ಕು ಹೇಳಿದ,

"ದೆಂಕಿಯಲ್ಲಿ ಇಟ್ಟಾಗಲೇ ಚೆನ್ನಕ್ಕಿ ಹೊಳಪು ಬರುವುದು. ಕಷ್ಟಗಳಲ್ಲಿಯೂ ಕೂಡ ನನ್ನ ನಾಮ ಸಂಕೀರ್ತನೆಯನ್ನು ತಪ್ಪದೆ, ನಿಲ್ಲಿಸದೆ ಆಚರಿಸುವ ವನೆ ನನಗೆ ನಿಜವಾದ ಭಕ್ತನು."

ಆಲಿಸಿ, ಲಕ್ಷ್ಮಿಯು ನಕ್ಕಳು,

"ನಿಮ್ಮ ಸಹಸ್ರನಾಮಗಳಿಂದ 'ಪ್ರಾಣದಃ' ಎನ್ನು ವುದನ್ನು ತೊಡೆದು ಹಾಕಿ, ಉಳಿದ ೯೯೯ ನಾಮಗ ಳನ್ನೇ ಜಪಿಸುತ್ತಿದ್ದಾನೆ. ಆತನು ಒಂದು ಹೆಸರನ್ನು ಕೀಲೆಣ್ಣೆಯಿಂದ ತೊಡೆದು ಹಾಕುವಷ್ಟು ಹೊತ್ತಿಗೆ ನಿಮ್ಮ ಮುಖವು ಈಗ ಇರುವಂತೆ ಕಪ್ಪಿಟ್ಟಿದೆ. ಕಷ್ಟ ಗಳು ಹೆಚ್ಚಾಗಿ, ಸಹನೆಯು ನಶಿಸಿದರೆ, ಉಳಿದ ಹೆಸ ರುಗಳಿಗೂ ಅದೇ ಗತಿ ಉಂಟಾದರೆ ಏನು ಮಾಡು ವುದು? ಆಗ ಸ್ವಾಮಿಯವರ ಅವತಾರ ಹೇಗಿ ರುತ್ತೋ ಏನೊ? ಎಷ್ಟೇ ಆಗಲಿ ನೀವು ಭಕ್ತ ಪರಾ ಧೀನರು. ಅವರಿಗೆ ಅಧೀನರಾಗಿ ಆ ಖ್ಯಾತಿಯನ್ನು ನೀವೀಗ ಹೇಗೆ ತಾನೆ ಉಳಿಸಿಕೊಳ್ಳುವಿರಿ?"

ಲಕ್ಷ್ಮಿಯ ಈ ಮಾತುಗಳನ್ನು ಆಲಿಸಿ, ಜಗದಾ ದಿದೇವನೂ, ಜಗದ್ವಂದ್ಯನೂ ಕೂಡ ಭಯಪಟ್ಟ ನೆಂದು ದೇವಾದಿ ದೇವತೆಗಳು, ವೈಕುಂಠದಲ್ಲಿನ ನಿತ್ಯಸೂರಿಗಳೂ ಹೇಳುತ್ತಾರೆ. ನಿಜವಾಗಲೂ ಭಯ ಪಟ್ಟನೊ, ಭಯಪಟ್ಟಂತೆ ತೋರಿಸಿಕೊಂ ಡನೊ -- ಹೇಳುವುದು ಕಷ್ಟ. ಎಷ್ಟೇ ಆಗಲಿ ಜಗ ನ್ನಾಟಕ ಸೂತ್ರಧಾರ ನಲ್ಲವೆ?

ಅಂತೆಯೇ ಆತನಿಗಿದ್ದ ಕಪ್ಪು ಆಕಾರದೊಂದಿಗೇ, ಅದನ್ನು ಧರಿಸಿಯೇ ಆತನು ಭೂಮಿಯ ಮೇಲಿ ಳಿದ. ಐವತ್ತು ಕತ್ತೆಗಳನ್ನು ಸೃಷ್ಟಿಮಾಡಿ, ಅದರ ಮೇಲೆ ಅಕ್ಕಿ, ಬೇಳೆ, ಕಾಳು ಇತ್ಯಾದಿ ಧಾನ್ಯಾದಿಗ ಳನ್ನೂ, ಬೆಲೆ ಬಾಳುವ ಒಡವೆಗಳು, ಚೀನೀ ಚಿನಾಂ ಬರಗಳನ್ನು ಹೇರಿಕೊಂಡು ರಾಜೋದ್ಯೋಗಿಯೋ ರ್ವನ ವೇಷದಲ್ಲಿ ಆತನು ಅನಂತಾರ್ಯನ ಮನೆಗೆ ಬಂದನು.

ಆಗ ಅನಂತಾರ್ಯನು ಮನೆಯಲ್ಲಿ ಇರಲಿಲ್ಲ. ಆತನ ಪತ್ನಿ ಮಹಾಲಕ್ಷ್ಮಿಯು ಆ ಹಳ್ಳಿಯವನನ್ನು ನೋಡಿ,

"ಯಾರಪ್ಪ ನೀನು? ಏನಿದೆಲ್ಲ?"

ಎಂದು ಕೇಳಿದಳು.

"ನಮ್ಮ ಮಹಾರಾಜರಿಗೆ ಅನಂತಾರ್ಯರ ಪಾಂಡಿ ತ್ಯದ ಬಗ್ಗೆ ಇತ್ತೀಚೆಗಷ್ಟೆ ತಿಳಿದು ಬಂದಿತು. ನಿಮ್ಮ ಕಷ್ಟಗಳನ್ನು ಆಲಿಸಿ, ಮನಕರಗಿ, ನಿಮಗೆ ತಲುಪಿಸು ವಂತೆ ಇವನ್ನೆಲ್ಲ ಕೊಟ್ಟು ಕಳುಹಿಸಿದಾರೆ. ದಯ ವಿಟ್ಟು ಸ್ವೀಕರಿಸಿತಾಯಿ!" ಎಂದ ಕೃಷ್ಣವರ್ಣದ ರಾಜೋದ್ಯೋಗಿ.

ಮಹಾಲಕ್ಷ್ಮೀಯು ಸಂತೋಷದಿಂದ ತಬ್ಬಿಬ್ಬಾ ದಳು. ಏನು ಹೇಳಬೇಕೆಂಬುದೇ ಹೊಳೆಯ ಲಿಲ್ಲ. ಅವಳ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡ ರಾಜೋದ್ಯೋಗಿಯೇ ತಂದಿದ್ದ ವಸ್ತುಗಳೆಲ್ಲವನ್ನೂ ಹೊತ್ತು ತಂದು ಒಂದು ಕೊಠಡಿಯಲ್ಲಿ ಭದ್ರಪಡಿಸಿ ದನು.

ಹೊರಡುವುದಕ್ಕೆ ಮುಂಚೆ,

"ಬರ್ತೀನಿ ತಾಯಿ! ನಿಮ್ಮವರು ಬಂದರೆ 'ಪ್ರಾಣದಃ' ಎನ್ನುವುದು ಅನ್ವರ್ಥ ನಾಮ. ಆತನ ಆಳ್ವಿಕೆಯಲ್ಲಿ ಸ್ವಲ್ಪ ನಿಧಾನತೆ, ಅಮಲು ಪಡಿಸುವು ದರಲ್ಲಿ ಸೋಮಾರಿತನ ಇರಬಹುದೇ ಹೊರತು, ಪೂರ್ಣ ಅಂಧಕಾರವಂತೂ ಇರುವುದಿಲ್ಲ' ಎಂದು ಹೇಳೀಮ್ಮ!" ಎಂದು ಹೇಳಿದ ಕೃಷ್ಣವರ್ಣದ ಆ ರಾಜೋದ್ಯೋಗಿಯು ಅಷ್ಟುದೂರ ಹೋಗಿ ಅಂತ ರ್ಧಾನನಾದನು.

ಭಿಕ್ಷಾಟನೆಗೆ ಹೋಗಿದ್ದ ಅನಂತಾರ್ಯನು ಒಂದು ಹಿಡಿ ಕಾಳನ್ನು ಶಲ್ಯದ ಗಂಟಿನಲ್ಲಿ, ತುಂಬಿಸಿಕೊಂಡು ಎಷ್ಟೋ ಸಂತೋಷದಿಂದ ಮನೆಗೆ ಬಂದ.

ಮನೆಯಲ್ಲಿ ಸಮೃದ್ಧಿಯಾಗಿದ್ದ ಸಾಮಗ್ರಿಗಳನ್ನು ನೋಡಿದ ಕೂಡಲೇ ಏನು ವಿಷಯ ಎಂದು ಪತ್ನಿ ಯನ್ನು ಕೇಳಿದ.

ಪತ್ನಿ ಮಹಾಲಕ್ಷ್ಮಿಯು ನಡೆದುದೆಲ್ಲವನ್ನೂ ಚಾಚೂ ತಪ್ಪದೆ ವಿವರಿಸಿದಳು.

ಆ ಕೂಡಲೇ ಅನಂತಾರ್ಯನು "ಜನಾರ್ಧನಾ! ಪ್ರಾಣದಃ! ಪುರಂಧರಃ, ಶೌರೀ....." ಎಂದು ಎತ್ತರದ ದನಿಯಲ್ಲಿ ಕೂಗಾಡುತ್ತಾ, ನೇರವಾಗಿ ಹೊರಗಡೆ ಓಡಿದ.

ಸ್ವಲ್ಪ ಹೊತ್ತಿಗೆಲ್ಲ ಆತನು ಜನಸಂಚಾರವಿಲ್ಲದ ಕಾಡಿನ ಪ್ರದೇಶವನ್ನು ಹೊಕ್ಕನು. ಅಲ್ಲಿಯೇ ನಿಂತು,

"ಮಹಾವಿಷ್ಣೋ! ನಾರಾಯಣ! ಜಗತ್ಸರ್ವಾ! ಲೋಕನಾಯಕಾ! ವಾಸುದೇವ! ನನ್ನ ಅಜ್ಞಾನವನ್ನು ಮನ್ನಿಸು ಪ್ರಭು! ಎಷ್ಟೋ ವರ್ಷಗಳಿಂದ ತುಂಬು ನಿಯಮ ನಿಷ್ಠೆಗಳಿಂದ ನಿನ್ನನ್ನು ಮನಸ್ಫೂರ್ತಿಯಾಗಿ ಪೂಜಿಸಿದೆನಲ್ಲ! ಎಂದಾದರೂ ನನಗೆ ನಿನ್ನ ದರ್ಶನ ಭಾಗ್ಯವನ್ನು ನೀಡಿರುವೆಯೆ? ನನಗೆ ಪ್ರತ್ಯಕ್ಷನಾಗಿರುವೆಯ ? ನಿಜ ಹೇಳಬೇಕೆಂದರೆ ಭಕ್ತಿ ಎಂದರೆ ಏನೆಂಬುದೇ ಗೊತ್ತಿಲ್ಲದ ನನ್ನ ಪತ್ನಿಗೆ ಸ್ವಲ್ಪ ಹೊತ್ತಿಗೆ ಮುಂಚೆಯಷ್ಟೇ ನಿನ್ನ ದರ್ಶನ ಭಾಗ್ಯವನ್ನು ನೀಡಿರುವೆ. ಇದು ನಿನಗೆ ನ್ಯಾಯವೇ ದೇವದೇವ? ನಿನ್ನ ದಿವ್ಯಮಂಗಳ ಸ್ವರೂಪದೊಂದಿಗೆ ನನ್ನೆದುರು ಪ್ರತ್ಯಕ್ಷನಾಗಿ, ಈ ಅಡಿಯೇನ್‌ಗೆ ದರ್ಶನ ನೀಡಿ, ಇವನ ಜನ್ಮವನ್ನು ಉದ್ಧರಿಸು ದೇವ! ಈ ದೀನನ ಜನ್ಮವನ್ನು ಚರಿತಾರ್ಥವನ್ನಾಗಿ ಮಾಡು! ಇಲ್ಲದಿದ್ದಲ್ಲಿ ಇಲ್ಲಿ ಹೀಗೆಯೇ ಶಾಶ್ವತವಾಗಿ ನಿದ್ರಾಹಾರಗಳನ್ನು ಬಿಟ್ಟು ಇದ್ದು ಬಿಡುವೆನು. ಇಲ್ಲಿಂದ ಸ್ವಲ್ಪವೂ ಚಲಿಸುವುದಿಲ್ಲ!"

ಎಂದು ಕೈಜೋಡಿಸಿ ನಿಂತುಬಿಟ್ಟ.

ಆಗ ಮಹಾವಿಷ್ಣುವು ಅನಂತಾರ್ಯನಿಗೆ ಪ್ರತ್ಯಕ್ಷನಾಗಿ, "ಭಕ್ತಾ! ಅನಂತಾರ್ಯ! ಸ್ವಲ್ಪ ನಿಧಾನವಾದುದಕ್ಕೆ ನನ್ನ ಮುಖವನ್ನು ಹೇಗೆ ಬದಲಾಗುವಂತೆ ಮಾಡಿದ್ದೀಯೊ ನೋಡು! ಈ ಮುಖವನ್ನು ನಿನಗೆ ತೋರಿಸಲಾರದೆ, ನಾನು ಬರಲಿಲ್ಲ. ನೀನು ಪ್ರಾಣದಃ ಎನ್ನುವ ಹೆಸರಿಗೆ ಬಳಿದಿರುವ ಕೀಲೆಣ್ಣೆಯನ್ನು ಒರೆಸಿಹಾಕಪ್ಪಾ ಮಗು!"

"ಹರಿ! ಹರಿ! ಎಂಥಾ ಮಾತಿದು ಜಗದ್ರಕ್ಷಕ! ನಿನಗೆ ನೋವುಂಟುಮಾಡಿದುದಕ್ಕೆ ಕ್ಷಮೆ ಇರಲಿ!"

ಎಂದು ಆ ಮಹಾವಿಷ್ಣುವಿನ ಸಂಪೂರ್ಣ ಸಹಸ್ರನಾಮಗಳನ್ನು ಭಕ್ತಿಭಾವದಿಂದ ಹೇಳಿ, ಭಗವಂತನನ್ನು ಸ್ತುತಿಸಿದನು.

ಆ ಕೂಡಲೇ ಪರಮಾತ್ಮನನ್ನು ಆವರಿಸಿದ್ದ ಕಪ್ಪು ಬಣ್ಣವೆಲ್ಲವೂ ಕಣ್ಮರೆಯಾಯಿತು. ಮೊದಲಿನ ಅಪಾರ ಸೌಂದರ್ಯದ ನೀಲ ಮೇಘಶ್ಯಾಮ ರೂಪ ಕಾಣಿಸಿತು. ದೇದೀಪ್ಯಮಾನವಾಗಿ ಬೆಳಗುತ್ತಿರುವ ಶ್ರೀ ಮಹಾವಿಷ್ಣುವಿನ ಮುಖಾರವಿಂದವನ್ನು ತೃಪ್ತಿಯಾಗುವಷ್ಟುನೋಡಿ, ಶಿರಬಾಗಿ ವಂದಿಸಿದ ಅನಂತಾರ್ಯ.

ಬರಕಾಲದಲ್ಲಿ ಪರಮಾತ್ಮನಿಂದ ಲಭಿಸಿದ ಆ ಪ್ರಸಾದವನ್ನು ಅನಂತಾರ್ಯನು ತಾನು ಸೇವಿಸಿದುದೇ ಅಲ್ಲ ಸುತ್ತಮುತ್ತಲ ಬಡಬಗ್ಗರಿಗೂ ದಾನ ಮಾಡಿದನು. ಪರಿಣಾಮವಾಗಿ ಪರಮಾತ್ಮನ ಕೃಪಾಕಟಾಕ್ಷ ಆ ಪ್ರದೇಶದಲ್ಲೆಲ್ಲ ಹರಡಿತೊ ಎನ್ನುವಂತೆ ಅಲ್ಲೆಲ್ಲ ಸಮೃದ್ಧ ಮಳೆಯಾಗಿ, ಎಲ್ಲೆಲ್ಲಿ ಸಂತಸ ಹರಡಿತು.

ಕಥೆಯನ್ನು ಆಲಿಸಿ, ಶಿಷ್ಯರೆಲ್ಲ ಸ್ತಬ್ಧರಾದರು.

ವಿಚಾರ ಅವರ ತಲೆಗಳಲ್ಲಿ ಪರಸ್ಪರ ಪ್ರಶ್ನಿಸತೊಡಗಿದ್ದವು. ಆಚಾರ್ಯರು ಎಲ್ಲರ ಮುಖಗಳನ್ನು ನೋಡಿದರು. ಮೃದುವಾಗಿ ನಕ್ಕು

"ಏನೂ ಪ್ರಶ್ನೆಗಳಿಲ್ಲವೆ?"

ಮೃದುವಾಗಿ ಕೇಳಿದರು.

ಗಂಟಲು ಸರಿಮಾಡಿಕೊಂಡು, ಎಂಬಾರ್‌ರವರು ಕೇಳಿದರು,

"ಸ್ವಾಮಿನ್! ಲೋಕರಕ್ಷಕನೇ ಪರಮಾತ್ಮನಾಗಿರುವಾಗ, ಓರ್ವ ಸಾಮಾನ್ಯ ಭಕ್ತನು ಲೇಪಿಸಿದ ಕೃಷ್ಣವರ್ಣದ ಪ್ರಭಾವಕ್ಕೆ ಆತನು ಒಳಗಾಗುವುದು ಸರಿಯೆ?"

"ಹಾಂ! ಒಳ್ಳೆ ಪ್ರಶ್ನೆ. ಪರಮಾತ್ಮನು ಸ್ವಭಾವತಃ ಭಕ್ತರ ವಿಷಯದಲ್ಲಿ ಯಾವ ಭೇದವನ್ನೂ ಎಣಿಸದೆ, ಅವರಿಗೆ ಅಧೀನನಾಗಿದ್ದೂ ತನ್ನ ಪರಮೈಶ್ವರ್ಯವನ್ನು ಮರೆಸುತ್ತಾನೆ. ತನ್ನ ಪರಮಾತ್ಮತ್ವವನ್ನು ಅವರ ಮೇಲೆ ಹೇರುವುದಿಲ್ಲ. ಬದಲಾಗಿ ಅವರ ಭಕ್ತಿಗೆ, ಅವರ ಮನೋಭಿಲಾಷೆಗಳಿಗೆ ಒಳಗಾಗಿ, ತನ್ನಲ್ಲಿ ಅವರು, ಅವರಲ್ಲಿ ತಾನು ಎನ್ನುವ ಭಾವವನ್ನು ಪ್ರತಿಧ್ವನಿಸುತ್ತಾನೆ.ಇದೇ 'ಅನುಕೂಲಃ' ಎನ್ನುವುದು. ಒಮ್ಮೊಮ್ಮೆ ಆತ ಶತಾವರ್ತಿಯಾಗುವನು. ಸುಳಿಗಳಲ್ಲಿ ಸಿಲುಕುವನು. ಈಗ ಕಥೆಯಲ್ಲಿ ಬಂದಂತಹ ಸನ್ನಿವೇಶ. ಇದಕ್ಕೆ ಆತನನ್ನು ನೂರು ಸುಳಿಗಳಲ್ಲಿ ಸಿಕ್ಕಿ ಹಾಕಿಕೊಂಡವನು ಎಂದು ಕರೆಯಲಾಗುತ್ತದೆ. ಹಾಗಾದಾಗ ತನ್ನ ಮನೋಹರ ಕಣ್ನೋಟದಿಂದ ಪದ್ಮನಿಭೇಕ್ಷಣನಾಗಿ ಭಕ್ತರ ಸಕಲ ಶ್ರಮಗಳನ್ನು ಪರಿಹರಿಸಿ, ಆತನು ತನಗೆ ಭಕ್ತರು ಇಟ್ಟ ಪದ್ಮ -- ನಿಭ-- ಈ ಕ್ಷಣ ಎನ್ನುವ ಹೆಸರನ್ನು ಪಡೆಯುವನು. ಅನಂತಾರ್ಯನ ಜೀವನ ಸನ್ನಿವೇಶದಲ್ಲೂ, ಶ್ರೀಮನ್ನಾರಾಯಣನು ಇದೇ ಪದ್ಮನಿಭೇಕ್ಷಣನಾದ. ಸತ್ಯ--ಕಾಮನಾಗಿ, ಸತ್ಯ ಸಂಕಲ್ಪನಾಗಿ ಎಲ್ಲರಿಗೂ ಸಕಲ ಸಿದ್ಧಿಗಳನ್ನೂ ನೀಡಿ ಧರ್ಮ ಸ್ವರೂಪನಾದ. ನಿಜ ಅರ್ಥದ ಮಹೇಂದ್ರನಾದ. ಪರಮಾತ್ಮನೇ ತಿಳಿಸಿದಂತೆ ಕಾರ್ಯ ಪ್ರವೃತ್ತಿಯಲ್ಲಿ ಸ್ವಲ್ಪ ನಿಧಾನ ಮಾಡಿದುದರಿಂದ, ಭಕ್ತನ ಕೀಲೆಣ್ಣೆಯ ಧಾಳಿಗೆ ತಲೆ ಬಾಗಿದ ಶಾಸ್ತ್ರ ಮಾಡಿದ. ಒಂದು ಘಳಿಗೆ ತಾನು ಭಕ್ತನ ದಾಳಿಗೆ ತಲೆ ಬಾಗಿದಂತೆ ಮಾಡಿ, ಭಕ್ತನ ಹಿರಿಮೆಯನ್ನು ಮೆರೆದುತನ್ಮೂಲಕ ತನ್ನ ಅಸಂಖ್ಯೇಯತ್ವವನ್ನು ಮೆರೆದ.

ಓಂ, ಶ್ರೀಮನ್ನಾರಾಯಣ ಚರಣೌ
ಶರಣಂ ಪ್ರಪದ್ಯೆ
ಶ್ರೀಮತೇ ನಾರಾಯಣಾಯ ನಮಃ

ಎಂದರು ಆಚಾರ್ಯರು ತಮ್ಮ ಗಂಭೀರ, ಕಂಚಿನ ಕಂಠದ ದನಿಯಲ್ಲಿ. ಅವರು ಪರಾಶರ ಭಟ್ಟರ ಕಡೆ ಅರ್ಥಗರ್ಭಿತವಾಗಿ ನೋಡಿದರು.

"ಶ್ರೀಮತೇ ನಾರಾಯಣಾಯ ನಮಃ" ಎಂದು ಆಚಾರ್ಯರಿಗೆ ವಂದಿಸಿ, ಪರಾಶರ ಭಟ್ಟರು ಆಚಾರ್ಯರ ಪಾದಗಳ ಕಡೆ ನೋಡಿ ವಂದಿಸಿದರು. ತಾವು ನೆರವೇರಿಸಬೇಕಾದ ಕಾರ್ಯದ ಬಗ್ಗೆ ಸೂಕ್ಷ್ಮ ದೊರೆತಂತಾಗಿ, ಕಣ್ಣುಮುಚ್ಚಿ, ಕೈ ಜೋಡಿಸಿದರು.

XXXXXXXXXXX

(7 ನೇ ಪುಟದಿಂದ)

ಯಾದ ಕುಲದಲ್ಲಿ ಜನ್ಮಿಸಿದರೂ ಸತ್ಪವರ್ತನ ಇರುವವನೇ ಉತ್ತಮ. ವ್ಯಕ್ತಿಗೆ ಶೀಲಪ್ರದಾನ. ಅದಿಲ್ಲದವನ ಜೀವಿತ ವ್ಯರ್ಥ.

ಮದ್ಯಪಾನದಿಂದ ಉಂಟಾಗುವ ಮತ್ತಿಗಿಂತಲು ಸಿರಿಸಂಪದಗಳು ಉಂಟುಮಾಡುವ ಮತ್ತು ಹೆಚ್ಚು.

ಈ ದೇಹ ರಥ
ಬುದ್ಧಿ ಸಾರಥಿ
ಇಂದ್ರಿಯಗಳು ಕುದುರೆಗಳು

ಈ ಕುದುರೆಗಳನ್ನು ಹತೋಟಿಯಲ್ಲಿಟ್ಟುಕೊಂಡರೆ ಉತ್ತಮ ಫಲಗಳು ಹೊಂದುತ್ತಾನೆ.

ಹಿಂಸೆಯಿಂದ ದುಷ್ಟರು, ದಂಡನೀತಿಯಿಂದ ಪ್ರಭುಗಳು, ಸೇವಾಪರತ್ವದಿಂದ ಸ್ತ್ರೀಯರು, ಕ್ಷಮಾಗುಣದಿಂದ ಧೀರರು ಶ್ರೇಯಸ್ಸುಹೊಂದುತ್ತಾರೆ. ವಾಕ್ಕನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವನು ಯಾವುವನ್ನಾದರೂ ಸಾಧಿಸಬಲ್ಲ.

(ವಿದುರ ನೀತಿಯ ಅಂತದ್ದವ್ವ ಭಾರತದ ಕಥೆಯಲ್ಲಿದ್ದರೂ ಅದರ ಹೆಚ್ಚು ಪಾಲು ಇಂದಿಗೂ ಪ್ರಸ್ತುತವೇ ಆಗಿದೆ ಎಂಬುದನ್ನು ಮರೆಯುವಂತಿಲ್ಲ.)

❀❀❀❀❀❀❀❀

# ಶ್ಯಾಮಲಾನವರತ್ನ ಮಾಲಿಕಾ

---ನಿರ್ಮಲಾ ರಾವ್.

ಶ್ರೀ ಶಂಕರ ಭಗವತ್ಪಾದರು ರಚಿಸಿರುವ ಸ್ತೋತ್ರ ಸಾಹಿತ್ಯದಲ್ಲಿ ದೇವೀ ಸ್ತೋತ್ರಗಳು ವಿಶಿಷ್ಟಸ್ಥಾನಗಳನ್ನು ಗಳಿಸಿವೆ. ಆಚಾರ್ಯರು ಸೌಂದರ್ಯಲಹರಿಯಂತಹ ತಂತ್ರಶಾಸ್ತ್ರ ಆಧಾರಿತ ಸ್ತೋತ್ರಗಳ ಜೊತೆಗೆ ಕೇವಲ ಶುದ್ಧ ಭಕ್ತಿ ರೂಪವಾದ ಹಲವಾರು ದೇವೀ ಸ್ತೋತ್ರಗಳನ್ನು ಸಾಹಿತ್ಯಕ್ಕೆ ನೀಡಿದ್ದಾರೆ. ಅವುಗಳಲ್ಲಿ 'ಶ್ಯಾಮಲಾನವರತ್ನ ಮಾಲಿಕಾ' ಎಂಬುದು ತುಂಬ ಮನೋಹರವಾದ ದೇವೀ ಸ್ತುತಿಯಾಗಿದೆ.

ಈ ಸ್ತೋತ್ರದಲ್ಲಿ ಉಪೇಂದ್ರ ವಜ್ರಾವೃತ್ತದಲ್ಲಿ ರಚಿತವಾದ ಒಂಭತ್ತು ಪದ್ಯಗಳಿವೆ. ಭಕ್ತಿಯ ನವವಿಧ ರೂಪಗಳು ನಾರದ ಭಕ್ತಿಸೂತ್ರದಲ್ಲಿ ಹೇಳಲಾಗಿರುವಂತೆ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನೆ, ನಮಸ್ಕಾರ, ದಾಸ್ಯಭಾವ ಹಾಗೂ ಆತ್ಮನಿವೇದನೆಗಳು ಹೃದಯಂಗಮವಾಗಿ ಈ ಸ್ತೋತ್ರದಲ್ಲಿ ರೂಪಿಸಲ್ಪಟ್ಟಿವೆ.

ಮೊದಲ ಶ್ಲೋಕದಲ್ಲಿ ಜಗನ್ಮಾತೆಯಾದ ದೇವಿಯನ್ನು 'ಓಂಕಾರ ಪಂಜರಶುಕೀ, ಉಪನಿಷದುದ್ಯಾನ ಕೇಲಿ ಕಲಕಂಠೀ ಆಗಮ ವಿಪಿನ ಮಯೂರೀ' ಎಂಬ ಈ ಕಾರಾಂತ ಸ್ತ್ರೀಲಿಂಗ ರೂಪಗಳನ್ನು ಅರ್ಥಗರ್ಭಿತವಾಗಿ ಉಪಯೋಗಿಸಲಾಗಿದೆ. ಗೌರೀ ದೇವಿಯನ್ನು ಪ್ರಣವವೆಂಬ ಪಂಜರದಲ್ಲಿ ವಿಹರಿಸುವ ಗಿಳಿಯಂತೆ, ವೇದಾಂತದ ಉದ್ಯಾನದಲ್ಲಿ ನಲಿಯುವ ಕೋಗಿಲೆಯಂತೆ, ವೇದವನದಲ್ಲಿ ನಲಿಯುವ ನವಿಲಿನಂತೆ, ಆಚಾರ್ಯರು ಅರ್ಥಗರ್ಭಿತವಾದ ಉಪಮೆಗಳನ್ನು ನೀಡಿದ್ದಾರೆ. ಓಂಕಾರದಿಂದ ಪ್ರಾರಂಭವಾಗುವ ಈ ಶ್ಲೋಕದಲ್ಲಿ ಶಬ್ದಬ್ರಹ್ಮವಾದ ಪ್ರಣವನಾದದಿಂದಲೇ ಶ್ರವಣ ರೂಪವಾದ ಭಕ್ತಿಯು ವ್ಯಕ್ತಪಟ್ಟಿದೆ.

ಎರಡನೆಯ ಶ್ಲೋಕದಲ್ಲಿ ವಾಗ್ದೇವಿಯಾದ ಶಾರದೆಯನ್ನು ಕೀರ್ತನ ರೂಪದ ಭಕ್ತಿಯ ಪ್ರತೀಕವಾಗಿ ಶಂಕರರು ಚಿತ್ರಿಸಿದ್ದಾರೆ. ಇದರಲ್ಲಿಯೂ ಗುರುಮುಖೇನ ಅಧ್ಯಾತ್ಮಮಾರ್ಗವನ್ನು ಶಾರದೆಯು ತೋರಿಸುವಳು -- ಎಂದು ಒತ್ತಿ ಹೇಳಿದ್ದಾರೆ. ಮೂರನೆಯ ಶ್ಲೋಕದಲ್ಲಿ ಕಾರುಣ್ಯವೇ ದೇವಿಯ ಸ್ಮರಣೆಯ ಫಲವೆಂದ ನಿರೂಪಿಸುವಾಗ ಸೌಂದರ್ಯ ಲಹರಿಯೂ, ಆನಂದ ಲಹರಿಯೂ ಆದ ದೇವಿಯನ್ನು ಶ್ಯಾಮಲ ವರ್ಣದವಳೆಂದು ಆಚಾರ್ಯರು ಅಣಕವಾಡಿದ್ದಾರೆ.

ಮುಂದಿನ ಪದ್ಯದಲ್ಲಿ ದೇವಿಯ ಮುಗುಳುನಗೆಯನ್ನು ವರ್ಣಿಸುತ್ತ 'ನಖಮುಖ ಮುಖರಿತ ವೀಣಾ' ಎಂಬ ಮಧ್ಯಾನುಪ್ರಸಾದೊಂದಿಗೆ

ಓಂಕಾರಪಂಜರಶುಕೀ ಮುಪನಿಷ--
ದುದ್ಯಾನಕೇಲಿಕಲ ಕಂಠೀಮ್
ಆಗಮ ವಿಪಿನ ಮಯೂರೀಮಾರ್ಯಾ--
ಮಂತರ್ವಿಭಾವಯೇ ಗೌರೀಮ್ ||೧||

ದಯಮಾನದೀರ್ಘನಯನಾಂ--
ದೇಶಿಕರೂಪೇಣ ದರ್ಶಿತಾಭ್ಯುದಯಾಮ್
ವಾಮ ಕುಚನಿಹಿತ ವೀಣಾಂ ವರದಾಂ--
ಸಂಗೀತಮಾತೃಕಾಂ ವಂದೇ ||೨||

ಶ್ಯಾಮಲಿಮಸೌಕುಮಾರ್ಯಾಂ--
ಸೌಂದರ್ಯಾನಂದಸಂಪದುನ್ಮೇಷಾಮ್
ತರುಣಿ ಮಕರುಣಾಪೂರಾಂ--
ಮದಜಲ ಕಲ್ಲೋಲಲೋಚನಾಂ ||೩||

ನಖಮುಖಮುಖರಿತ ವೀಣಾನಾದ--
ರಸಾಸ್ವಾದ ನವನವೋಲ್ಲಾಸಮ್
ಮುಖಮಂಬ ಮೋದಯತು ಮಾಂ--
ಮುಕ್ತಾತಾಟಂಕ ಮುಗ್ಧಹಸಿತಂ ತೇ ||೪||

ಸರಿಗಮಪದನಿಸ ತಾಂತಾಂ ವೀಣಾ--
ಸಂಕ್ರಾಂತಕಾಂತ ಹಸ್ತಾಂತಾಮ್
ಶಾಂತಾಂ ಮೃದುಲಸ್ವಾಂತಾಂ--
ಕುಚಭರತಾಂತಾಂ ನಮಾಮಿ ಶಿವಕಾಂತಾಮ್ ||೫||

ಅವಟುತಟಿಘಟಿತ ಚೂಲೀತಾತ--
ತಾಲೀಪಲಾಶ ತಾಟಂಕಾಮ್
ವೀಣಾವಾದನವೇಲಾ--
ಕಂಪಿತ ಶೀರ್ಷಾಂ ನಮಾಮಿ ಮಾತಂಗೀಮ್ ||೬||

ಮಣಿಭಂಗಮೇಚಕಾಂಗೀಂ ಮಾತಂಗೀಂ--
ನೌಮಿ ಸಿದ್ಧ ಮಾತಂಗೀಮ್
ಯೌವನ ವನಸಾರಂಗೀಂ ಸಂಗೀತಾಂ--
ಭೋರುಹಾನುಭವ ಭೃಂಗೀಮ್ ||೭||

ವೀಣಾರವಾನುಷಂಗಂ ವಿಕಚಮದಾ--
ಮೋದ ಮಾಧುರೀ ಭೃಂಗಮ್
ಕರುಣಾಪೂರತರಂಗಂ ಕಲಯೇ--
ಮಾತಂಗಕನ್ಯಕಾಪಾಂಗಮ್ ||೮||

ಮೇಚಕಮಾಸೇಚನಕಂ ಮಿಥ್ಯಾ
ದೃಷ್ಟಾಂತಮಧ್ಯಭಾಗಂತೇ
ಮಾತಃ ಸ್ವರೂಪ ಮನಿಶಂ ಮಂಗಲ--
ಸಂಗೀತ ಸೌರಭಂ ಮನ್ಯೇ ||೯||

**ತಿರುಮಲೆ -- ತಿರುಪತಿ ದೇವಸ್ಥಾನಗಳು**

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.

2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.

3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.

4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.

5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.

6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**

ತಿರುಪತಿ.

ಉತ್ಕೃಷ್ಟವಾದ ಕಾವ್ಯಗುಣ ಸಹಿತವಾಗಿ ನೋಡಿದಷ್ಟೂ ಹೊಸ ಹೊಸ ಉಲ್ಲಾಸಗಳನ್ನು ಮೂಡಿಸುವ ದೇವಿಯ ವದನಾರವಿಂದದ ವರ್ಣನೆಯು ಇದೆ. ಐದನೆಯ ಪದ್ಯದಲ್ಲಿ 'ಸರಿಗಮಪದನಿ' ಎಂಬ ಏಳು ಸ್ವರಗಳನ್ನು ಸಪ್ತ ಮಾತೃಕೆಯರಂತೆ ತನ್ನ ಹಿಡಿತದಲ್ಲಿಟ್ಟುಕೊಂಡಿರುವ ಏನು ನುಡಿಸಿದರೂ ಸಪ್ತ ಸ್ವರಗಳನ್ನು ಮೂಡಿಸುವ ಶಿವವಲ್ಲಭೆಯ ಸುಂದರವಾದ ಬೆರಳುಗಳನ್ನು ಭಕ್ತಿಯಿಂದ ಆಚಾರ್ಯರು ಧ್ಯಾನಿಸಿದ್ದಾರೆ. ಇಲ್ಲಿ 'ತಾಂತಾಂ, ಶಾಂತಾಂ, ಸ್ವಾಂತಾಂ, ಶಿವಕಾಂತಾಂ' ಎಂಬ ಅಂತ್ಯಾನು ಪ್ರಾಸದ ಹಾಗೂ ವೀಣೆಯ ಧ್ವನಿಯನ್ನು ನೆನಪಿಸುವ ಪದಗಳನ್ನೇ ಬಳಸಲಾಗಿದೆ. ಶಂಕರ ಅಮೋಘ ಸಂಗೀತ ಜ್ಞಾನ ಇದರಲ್ಲಿ ವ್ಯಕ್ತವಾಗುತ್ತದೆ.

ಆರನೆಯ ಶ್ಲೋಕದಲ್ಲಿ ದೇವಿಯ ಮಾತಂಗೀ ರೂಪದ ವರ್ಣನೆ ಇದೆ. ಇಲ್ಲಿ 'ಟ' ಕಾರವನ್ನೇ ಹೆಚ್ಚಾಗಿ ಬಳಸಲಾಗಿದೆ. ವೀಣಾವಾದನದ ಸಮಯದಲ್ಲಿ ದೇವಿಯ ತಾಟಂಕವು (ತಾಳೆಯ ಎಲೆ) ತಲೆಯಾಡಿಸಿದಾಗ ವೀಣೆಯ ಟಂಕಾರದೊಂದಿಗೆ ಸುಂದರವಾಗಿ ಅಲುಗಾಡಿಸುತ್ತಿರುವ ದೃಶ್ಯವನ್ನು ನೆನೆದು ಆಚಾರ್ಯರು ಆಕೆಗೆ ನಮಸ್ಕರಿಸಿದ್ದಾರೆ.

'ಮಣಿಭಂಗ ಮೇಚಕಾಂಗೀಂ' ಎಂಬ ಏಳನೆಯ ಪದ್ಯದಲ್ಲಿ ಸಿದ್ಧಮಾತಂಗಿಯನ್ನು ದಾಸ್ಯ ಭಕ್ತಿಯ ಪ್ರತೀಕವಾಗಿ ಸಂಗೀತವೆಂಬ ಕಮಲ ಪುಷ್ಪದ ಮಧುವನ್ನು ಸೇವಿಸುವ ಮಾತಂಗಿಯನ್ನು ಚಿತ್ರವಿಚಿತ್ರವಾದ ರತ್ನಗಳನ್ನು ಧರಿಸಿದ ಸುಂದರಿಯನ್ನಾಗಿ ಬಣ್ಣಿಸಲಾಗಿದೆ. ದೇವಿಯ ಸಖ್ಯ ಭಕ್ತನಿಗೆ ಅತ್ಯಾವಶ್ಯಕ. ಕಾರಣ 'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ' ಎಂಬುದು ಆಚಾರ್ಯರು ನಿರೂಪಿಸಿದ ಗಾದೆ ಮಾತು. ತಾಯಿಯ ಕೃಪೆ ಹಾಗೂ ಸ್ನೇಹ ಮಗುವಿಗೆ ಯಾವಾಗಲೂ ಬೇಕು. ಇದೇ ಸಖ್ಯ ಭಕ್ತಿಯಾಗಿದೆ.

ಆತ್ಮ ನಿವೇದನೆಯ ಪ್ರತೀಕವಾದ ಎಂಟನೆಯ ಪದ್ಯದಲ್ಲಿ ದೇವಿಯ ವೀಣಾನಾದದಲ್ಲಿ ಅನುರಾಗವಿದೆ. ಆನಂದವೆಂಬ ಮಧುವಿಗೆ ದೇವಿಯ ಕಡುಗಪ್ಪುವರ್ಣದ ನೇತ್ರಗಳು ದುಂಬಿಯಂತಿವೆ. ಭಕ್ತನ ಆತ್ಮ ನಿವೇದನೆಯೇ ಉಪಾಸನೆಯಾಗಿದೆ. ಮಾತಂಗ ಕನ್ಯೆಯ ಅಪಾಂಗ -- ದೇವಿಯ ಕಡೆಗಣ್ಣೋಟವೇ ದಿವ್ಯಭಕ್ತನ ಪರಮಗುರಿಯಾಗಿದೆ ಎಂಬುದನ್ನು ಅನುಷಂಗ, ಭೃಂಗ, ತರಂಗ, ಅಪಾಂಗ -- ಎಂಬ ಸುಂದರ ಲಾಕ್ಷಣಿಕ ಶಬ್ದಗಳ ಬಳಕೆಯಿಂದ ಈ ಸ್ತೋತ್ರದ ಕಾವ್ಯ ಸೌಂದರ್ಯವನ್ನು ಆಚಾರ್ಯರು ಹೆಚ್ಚಿಸಿದ್ದಾರೆ.

ನವವಿಧ ಭಕ್ತಿಯನ್ನು ಪ್ರತಿನಿಧಿಸುವ ಒಂಭತ್ತನೆಯ ಶ್ಲೋಕದಲ್ಲಿ ಮೇಚಕಮಾಸೇಚನಕಂ -- ಸಂಗೀತವೇ ಸದಾದೇವಿಯ ಸೌರಭ; ಆಕೆಯ ಸೌಂದರ್ಯಕ್ಕೆ ಆದಿಯಾಗಲೀ ಅಂತ್ಯವಾಗಲೀ ಇಲ್ಲ. ದೇವೀ ಸ್ತುತಿಗೆ ಶಬ್ದಗಳ ಮಿತಿ ಇದೆ, ಆದಿ -- ಅಂತ್ಯಗಳಿವೆ ಎಂದು ತಿಳಿಯುವುದೇ ಒಂದು ಭ್ರಮೆ, ಎಂದು ಆಚಾರ್ಯರು ದೃಢಪಡಿಸುತ್ತಾರೆ.

ಹೀಗೆ ಸುಂದರವಾದ ವೃತ್ತದಲ್ಲಿ ಪೋಣಿಸಲಾದ ನವರತ್ನಗಳಂತಿರುವ ಪದ್ಯಮಾಲಿಕೆಯನ್ನು ಜಗನ್ಮಾತೆಯಾದ ದೇವಿಗೆ ಅರ್ಪಿಸಿದ ಶಂಕರರು 'ಸದಾ ಆ ಜಗನ್ಮಾತೆಯ ರೂಪವನ್ನೇ ಹೃದಯದಲ್ಲಿ ಧ್ಯಾನಿಸಬೇಕು. ಇದರಿಂದಲೇ ಅಧ್ಯಾತ್ಮಜ್ಞಾನ, ಆತ್ಮವಿಕಾಸ, ಹಾಗೂ ಮೋಕ್ಷಮಾರ್ಗದಲ್ಲಿ ಸಾಧನೆಯಾಗುತ್ತದೆ' ಎಂದು ದೇವೀ ಮಹಿಮೆಯನ್ನು ಮಂತ್ರ ಸದೃಶವಾದ ಸುಂದರವಾದ ಶಬ್ದಗಳಲ್ಲಿ ಹಿಡಿದಿಟ್ಟಿದ್ದಾರೆ.

ಶ್ಯಾಮಲಾ ನವರತ್ನಮಾಲಿಕೆಯು ಒಂದು ಅಪರೂಪವಾದ ದೇವೀ ಸ್ತೋತ್ರ. ಸಂಗೀತ, ತಾಳ, ಲಯಗಳಿಗೆ ಹೇಳಿ ರಚಿಸಿದಂತಿರುವ ಈ ಪದ್ಯಗಳ ಪಾರಾಯಣದಿಂದ ದೇವೀ ಭಕ್ತರ ಮನಸ್ಸೆಂಬ ಕಮಲ ಪುಷ್ಪಗಳು, ಭಕ್ತಿಸೂರ್ಯನ ಉದಯದೊಂದಿಗೆ ಅರಳಿ, ವೇದಾಂತವೆಂಬ ಉದ್ಯಾನದಲ್ಲಿ ನಳನಳಿಸುತ್ತವೆ. ಈ ಸ್ತೋತ್ರದಲ್ಲಿ ಸುಲಲಿತ ಪದಗಳ ಬಳಕೆ ಹಾಗೂ ಒತ್ತಕ್ಷರಗಳ ಅತಿ ಕಡಿಮೆ ಬಳಕೆ ಆಚಾರ್ಯರ ಅದ್ಭುತ ಕವಿತಾ ಸಾಮರ್ಥ್ಯಕ್ಕೆ ಉತ್ತಮ ಉದಾಹರಣೆಯಾಗಿದೆ. ಈ ಸ್ತೋತ್ರವನ್ನು ದೇವೀ ಭಕ್ತರು ಶುಕ್ರವಾರಗಳಂದು ಪ್ರದೋಷಕಾಲದಲ್ಲಿ ಪಠಿಸಿದಲ್ಲಿ ವಾಕ್‌ಸಿದ್ಧಿ ಹಾಗೂ ಮಾನಸಿಕ ನೆಮ್ಮದಿ ದೊರೆಯುತ್ತದೆ ಎನ್ನುವುದು ಹಿರಿಯರ ಅನುಭವವಾಗಿದೆ.



# A HEALING TOUCH

## T. T. DEVASTHANAMS INTRODUCES
## SRI BALAJI AROGYAVARAPRASADINI SCHEME

For ages, Tirumala, the abode of Lord Venkateswara, has been a great centre of pilgrimage. Thousands of devotees sit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind. TTD already manages a eprosorium, centre for physically handicapped, a poor home and also a central hospital. To provide the most advanced medical ɛchnology to the needy, the TTD has launched another monument, a blessing from the Lord by opening Sri Venkateswara ıstitute of Medical Sciences -- a sophisticated super speciality centre on the lines of AIIMS of New Delhi & JIMPER of Pondicherry nd PGI of Chandigarh. Total well being of man is the aim of Sri Venkateswara Institute of Medical Sciences, which apart from ffering service, training and education in medical sciences, also encourages Research and development.

The doors to such a state of the art technology should be open to our poor and disabled brethren.

With a view to achieving this, Sri Venkateswara Institute of Medical Sciences has introduced a New scheme Balaji ,rogyavaraprasadini Scheme. To accomplish the goal of proving the sophisticated medical technology to every individual at n affordable rate, we invite the generous co-operation of philanthropists and the general public.

### ˈhe Scheme in essence:

A donor can make an endowment of Rs. 1000/- or multiples thereof / Rs. 1 lakh / Rs. 5 lakhs / Rs. 10 lakhs to T.T. )evasthanams which will in turn contribute matching grant. The entire amount will be deposited in fixed deposit in a nationalised ;ank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs. 10 lakhs r above. These endowment chairs are purely research oriented.

- Donations can be made by any individual / family / company / firms etc.
- The name of the donor who endows Rs. 5 lakhs or more will be displayed prominently in the Reception hall of the hospital.
- The discharge ticket of the benefited patient will carry the name of the donor.

### \dditional Benefit and facilities :

- Donations to Sri balaji Arogyavaraprasadini Scheme are exempted from Income Tax under 80 (G).
- Paid rooms / Air conditioned rooms will be allotted to family members of the donor in the hospital.
- Paid rooms can be named after donors who contribute a sum of Rs. 5 lakhs or above.
- By paying Rs. 5 lakhs and above, a donor may sponsor one operation per year.
- Donors can sponsor feeding of the In-patients and out-patients. They may also sponsor a travel fellowship for the faculty per year.

All donations, by D.Ds. drawn in favour of The Executive Officer, T.T. Devasthanams, Tirupati-517 501 (Andhra Pradesh) should reach the Director, Sri Venkateswara Institute of Medical Sciences, Tirupati along with the following particulars.

- Name and address along with the latest passport-size photographs of the family members of the donor who contributes Rs. 1 lakh or more.
- Name and address of the person to whom Income Tax Exemption Certificate is to be issued.

The donors are also welcome to offer equipment, vehicles etc. to SVIMS or even sponsor health camps in rural areas, f they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**

## TIRUMALA TIRUPATI DEVASTHANAMS
# Sri Venkateswara Vanabhivriddhi Scheme

## An Appeal . . .

*He that planteth a tree is the servant of God*
*And Provideth a kindness for many generation*
*And faces that he, hath not seen shall bless him*

Sacred Forests of Tirumala are the precious gift of Lord Venkateswara to mankind. With a view to safeguarding its unique yet delicate ecological condition, Tirumala Tirupati Devasthanams have introduced a series of exciting schemes called **Sri Venkateswara Vanabhivriddhi Schemes.** The Schemes seek to provide a rare opportunity to the public for participation in a massive plantation project implemented by the Forest Department of T.T. Devasthanams.

The salient features of Sri Venkateswara Vanabhivriddhi Schemes are:

**VRIKSHA SAMVARDHANAM :** Under this Scheme, about one acre of land will be brought under plantation.

**Benefits :**

- Plantation will be named after the donor or person of his choice.
- Every year free accommodation on 2 ordinary days at Tirumala for 10 years.
- One paid special darshan every year for 5 persons for 10 years.

**Donation :** Rs. 15,000.

**VRIKSHA PRASADAM :** The Scheme is proposed for raising 100 fruit and flowering seedling every year.

**Benefits :**

- Distribution of one hundred seedlings, both fruit bearing and flowering in the donor's name every year.
- Two days free stay at Tirumala every year on any ordinary days for 10 years.
- One paid special darshan every year for five persons for 10 years.

**Donation :** Rs. 10,000.

**SMARAKA VANALU :** Under this scheme 10 saplings of selected species will be planted in a grove and maintained for five years.

**Benefits :**

- The grove will be named after the donor.
- Every year paid special darshan for five persons for five years.

**Donation :** Rs. 2,000.

**VANA SAMRAKSHANA BHAGA SWAMYAM :** is proposed to protect and improve the natural forest cover on Tirumala hills.

**Benefits :**

- Diplay of the donor's name.
- Paid special darshan for five persons for one year.

**Donation :** Rs. 1,000.

**ADHYAYANA VANALU :** Plantation and maintenance of a variety of species will be taken up under this scheme in the proposed botonical garden at Tirumala.

**Benefits :**

- Display of donor's name near the plant.

**Donation :** Rs. 500.

**VRIKSHA DATTATA :** is a bold scheme featuring adoption and plantation of avenue trees on the ghat road and at Tirumala.

**Benefits :**

- Display of donor's name.

**Donation :** Rs. 250.

We appeal to all devotees to donate liberally and help us to preserve the priceless forest wealth of Tirmala - The Abode of LORD VENKATESWARA.

Please send your donations by Demand draft to the **The Executive Officer, T. T. Devasthanams, TIRUPATI - 517 507.**

EXECUTIVE OFFICER

# ಅನ್ನಮಾಚಾರ್ಯ ಕಾವ್ಯ ಸುಧೆ



ಹದಿನೈದನೆಯ ಶತಮಾನದ ಆದಿಭಾಗದಲ್ಲಿ ಆಂಧ್ರಪ್ರದೇಶದ ರಾಜಂಪೇಟೆಯ ತಾಳ್ಳಪಾಕದಲ್ಲಿ ಹುಟ್ಟಿ ಬಾಲ್ಯದಲ್ಲೇ ತಿರುಮಲೆಗೆ ಆಗಮಿಸಿ, ಶ್ರೀವೆಂಕಟೇಶ್ವರಸ್ವಾಮಿಯ ಭಕ್ತಿ ಸಾಮ್ರಾಜ್ಯದಲ್ಲಿ ಸೇರಿ ಹೋಗಿ ದಿನಕ್ಕೊಂದಾದರೂ ಕೃತಿ ಸೃಜಿಸುವವರಾಗಿ ತಮ್ಮ ದೀರ್ಘ ಜೀವನಾವಧಿಯಲ್ಲಿ ಮೂವತ್ತೆರಡು ಸಾವಿರ ಕೃತಿಗಳನ್ನು ಬರೆದು ತೆಲುಗು ಸಾಹಿತ್ಯದಲ್ಲಿ ಪದಕವಿತಾಪಿತಾಮಹನೆಂಬ ಹೆಸರನ್ನು ಪಡೆದು, ಸ್ವಾಮಿಗೇ ತಮ್ಮೆಲ್ಲ ಕೃತಿಗಳನ್ನೂ ಅಂಕಿತ ನೀಡಿದವರು ಅನ್ನಮಾಚಾರ್ಯ. ಅವರ ಕೃತಿಗಳಲ್ಲಿ ಉಪಲಬ್ಧವಾದದ್ದು ಸ್ವಲ್ಪವೇ. ಅವುಗಳನ್ನು ತಿ.ತಿ.ದೇ. 36 ಸಂಪುಟಗಳಲ್ಲಿ ಪ್ರಕಟಿಸಿದೆ. ಪ್ರಕಟವಾಗಿರುವುದರಲ್ಲಿಯೂ ಪ್ರಾತಿನಿಧಿಕವೆಂಬುದನ್ನು ಆಯುವುದು ಕಷ್ಟದ ಕೆಲಸವೇ. ಯಾವುದೇ ಹತ್ತನ್ನು ಆಯ್ದುಕೊಂಡರೂ ಇನ್ನೂ ಮೂರು ನಾಲ್ಕು ಹತ್ತು ಕೃತಿಗಳ ಮಾಲೆ ಸಾಲಾಗಿ ನಿಲ್ಲುವುದಾದ್ದರಿಂದ, ಇಲ್ಲಿ ಅಂತಹ ಪ್ರಯತ್ನವನ್ನೇನೂ ನಡೆಸದೆ ಹಲವು ಕೃತಿಗಳನ್ನು ಅವು ದೊರಕಿದಂತೆ ಎತ್ತಿ ನೀಡಲಾಗಿದೆ. ತೆಲುಗಿನ ಕೃತಿಗಳ ತಾತ್ಪರ್ಯ ನಿರ್ದೇಶನಕ್ಕಾಗಿ ಕೆಳಗಿನ ಟಿಪ್ಪಣಿ ಸಹಾಯವಾಗಬಹುದು. (ಸ್ವಾರಸ್ಯವನ್ನು ಅನುಭವಿಸಲು ಮೂಲವೇ ಶರಣ್ಯ)

೧

(ಅನ್ನಮಾಚಾರ್ಯರು ತಾವು ಬರೆದ ಸಂಕೀರ್ತನೆಗಳನ್ನು ಸ್ವಾಮಿಗೆ ಅರ್ಪಿಸಿ ಹೇಳುತ್ತಾರೆ. ನಿನ್ನ ಕೀರ್ತಿರೂಪದ ಪುಷ್ಪಗಳು. ನಿನ್ನ ಪಾದಗಳಿಗೆ ನಾನು ಮಾಡಿದ ಪೂಜೆಗೆ ಸಂದ ಹೂವುಗಳು. ಒಂದು ಸಂಕೀರ್ತನೆಯೇ ಸಾಕು ನಮ್ಮನ್ನು ರಕ್ಷಿಸಲು, ಮಿಕ್ಕದ್ದು ಹಾಗೆಯೇ ಭಂಡಾರದಲ್ಲಿರಲಿ. ನನ್ನ ನಾಲಗೆಯ ಮೇಲೆ ನಿಂತು ಹಾಡಿಸಿದ್ದು ನೀನೇ. ನಿನ್ನನ್ನು ಸ್ತುತಿಸಲು ನಾನೆಷ್ಟರವನು, ನಿನ್ನ ಮಹಿಮೆಯನ್ನು ಕೊಂಡಾಡಿರುವೆನಲ್ಲದೆ, ನನ್ನ ಸ್ವಾತಂತ್ರ್ಯವನ್ನು ಹೇಳಿಲ್ಲಸ್ವಾಮಿ ನಾನು ನಿನ್ನ ದಾಸ.)

ದಾಚುಕೊ ನೀಪಾದಾಲಕು ದಗ ನೇಚೇಸಿನ ಪೂಜಲಿವಿ
ಪೂಚಿ ನೀ ಕೀರ್ತಿ ರೂಪ ಪುಷ್ಪಮುಲಿವಿಯಯ್ಯಾ

ಒಕ್ಕ ಸಂಕೀರ್ತನೇ ಚಾಲು ವೊದ್ದಿಕ್ಕೆ ಮಮ್ಮುರಕ್ಷಿಂಚಗ
ತಕ್ಕಿನವಿ ಭಂಡಾರಾನ ದಾಚಿವುಂಡನೀ
ವೆಕ್ಕಸಮಗು ನೀ ನಾಮಮು ವೆಲ ಸುಲಭಮು ಫಲಮಧಿಕಮು
ದಿಕ್ಕೈ ನನ್ನೇಲಿತಿವಿತನಿವಿ ತೀರನಿ ನಾ ಧನಮಯ್ಯಾ

ನಾ ನಾಲಿಕ ಪೈನುಂಡಿ ನಾನಾ ಸಂಕೀರ್ತನಲು
ಪೂನಿ ನಾಚೇ ನಿನ್ನು ಪೊಗಡಿಂಚಿತಿವಿ
ವೇ ನಾಮಾಲ ವೆನ್ನುಡಾ ವಿನುತಿಂಚನೆಂತವಾಡ
ಕಾನಿಮ್ಮನಿ ನಾಕೀ ಪುಣ್ಯಮು ಗಟ್ಟಿತಿ ವಿಂತೇಯಯ್ಯಾ

ಈ ಮಾಟ ಗರ್ವಮು ಕಾದು ನೀ ಮಹಿಮೆ
ಕೊನಿಯಾಡಿತಿ ಗಾನಿ
ಚೇಮುಂಚಿ ನಾ ಸ್ವಾತಂತ್ರ್ಯಮು ಚೆಪ್ಪಿನವಾಡ ಗಾನು
ನೇಮಾನಂ ಬಾಡೇವಾಡನು ನೇರಮುಲೆಂಚಕುಮಿ
ಶ್ರೀ ಮಾಧವ ನೀ ದಾಸುಡ ಶ್ರೀ ವೆಂಕಟೇಶುಡವಯ್ಯಾ

೨

('ಸಾಲವಿಲ್ಲದ ಸಂಸಾರ ಸ್ವಲ್ಪವಾದರೂ ಸಾಕು. ಸ್ವಲ್ಪವಾದರೂ ಸರಿಯಾದ ಸಂಬಳ ಇದ್ದರೆ ಸಾಕು. ಸೋರದ ಮಾಳಿಗೆಯ ಗುಡಿಸಲು ಸಾಕು, ಚಿಂತೆಯಿಲ್ಲದ ಅಂಬಲಿ ಸಾಕು. ಧಿಕ್ಕಾರವಿಲ್ಲದ ಬದುಕು ಒಂದು ದಿನವಾದರೂ ಸರಿಯೇ. ರಂಪವಂತೆ ಹರಿಯುವ ಕೋರಿಕೆಗಳಿಗಿಂತ ವೆಂಕಟಪತಿಯನ್ನು ಸೇರುವಾಸೆಯೊಂದೇ ಸಾಕು' -- ಸಂಸಾರದ ಅಸಾರತೆಯನ್ನು ವಿವರಿಸಿದ್ದರೆ ಅನ್ನಮಾಚಾರ್ಯರು.)

ಅಪ್ಪು ಲೇನಿ ಸಂಸಾರಮ್ಮೈನ ಪಾಟೇ ಚಾಲು
ತಪ್ಪುಲೇನಿ ಜೀತಮೊಕ್ಕ ತಾರಮ್ಮೈನಚಾಲು

ಕಂತಲೇನಿ ಗುಡಿಶೊಕ್ಕ ಗಂಪಂತಯಿನ ಚಾಲು
ಚಿಂತ ಲೇನಿಯಂಬಲೊಕ್ಕ ಚೇರೆಡೇ ಚಾಲು
ಜಂತದ್ಯೆನ ತರುಣಿ ಯೇ ಜಾತ್ಯೆನ ನದೆಚಾಲು
ವಿಂತಲೇನಿ ಸಂಪದೊಕ್ಕ ವೀಸಮೇ ಚಾಲು

ತಿಟ್ಟು ಲೇನಿ ಬ್ರದುಕೊಕ್ಕ ದಿನ ಮ್ಯೆನ ನದೆ ಚಾಲು
ಮುಟ್ಟು ಲೇನಿ ಕೂಡೊಕ್ಕ ಮುದ್ದೆಡೇ ಚಾಲು
ಗುಟ್ಟು ಚೆಡಿ ಮನುಕಂಟೆ ಕೊಚೇಪು ಮೇಲ್ಯೆನ ಚಾಲು
ವಟ್ಟಿ ಜಾಲಿಪಡಕುಂಟೆ ವಚ್ಚಿನಂತೆ ಚಾಲು

ಲಂಪಟ ಪಡನಿ ಮೇಲು ಲವಲೇಶಮೇ ಚಾಲು
ರೊಂಪಿಕಂಬ ಮೌಕಂಟೆ ರೋಯುಟೆ ಚಾಲು
ರಂಪಪು ಗೋರಿಕಕಂಟೆ ರತಿ ವೆಂಕಟಪತಿ
ಪಂಪುನ ನಾತನಿ ಜೇರೆ ಭವಮೆಚಾಲು

೩

(ರಾತ್ರಿಯೆಲ್ಲ ರತಿಕ್ರೀಡಾಚತುರನೊಡನಾಡಿದ 'ಮಾತು ಮಧು ವಿನ ಮಾತೆ ಮಲಗಿರುವವಳು'. ಆಕೆ ಶ್ರೀ ವೆಂಕಟೇಶಕಾಮಿನಿ, ದೆಳಗ್ಗೆ ಮುತ್ತಿನ ಮಂಚದ ಮೇಲೆ ಮಲಗಿರುವುದನ್ನು ವಿವರಿಸುತ್ತಾ ನಡೆದಿದ್ದಾನೆ ಕವಿ.)

ಪಲುಕು ತೇನೆಲ ತಲ್ಲಿ ಪವಳಿಂಚೆನು
ಕಲಿಕಿತನಮುಲ ವಿಭುನಿ ಕಲಸಿನದಿ ಗಾನ

ನಿಗನಿಗನಿ ಮೋಮುಪ್ಯೆ ನೆರಲು ಗೆಲಕುಲಚೆದರ
ಪಗಲ್ಯೆನ ದಾಕ ಜೆಲಿ ಪವಳಿಂಚೆನು
ತೆಗನಿ ಪರಿಣತುಲತೊ ತೆಲ್ಲವಾರಿನ ದಾಂಕ
ಜಗದೇಕ ಪತಿ ಮನಸು ಜೆಟ್ಟಿಗೊನೆಗಾನ

ಕೊಂಗುಜಾರಿನ ಮೆರುಗು ಗುಬ್ಬಲೊಲಯಗದರುಣಿ
ಬಂಗಾರು ಮೇಡ ಪೈ ಪವಳಿಂಚೆನು
ಚೆಂಗಲುವ ಕನುಗೊನಲ ಸಿಂಗಾರಮುಲು ದೊಲಕ
ಅಂಗಜ ಗುರುನಿ ತೋಡನಲಸಿನದಿಗಾನ

ಮುರಿಪೆಂಪು ನಟನತೊ ಮುತ್ಯಾಲ ಮಲಗುಪ್ಯೆ
ಪರವಶಂಬುನ ದರುಣಿ ಪವಳಿಂಚೆನು
ತಿರುವೆಂಕಟಾಚಲಾಧಿಪುನಿ ಕೌಗಿಟ ಗಲಸಿ
ಅರವಿರ್ಯೆನುನುಜೆಮಟ ನಂಟಿನದಿ ಗಾನ

೪

(ಜೀವನ ದೈನ್ಯತೆಯನ್ನು ದರ್ಪಣಗೊಳಿಸುವ ಕೀರ್ತನೆ. ಅನಂತ ಅಪರಾಧ ಎನ್ನಲ್ಲಿ, ಅನಂತ ದಯೆ ನಿನ್ನದು, ಸಕಲ ದೃಷ್ಟ ಕಾರ್ಯಗಳನ್ನು ಮಾಡಿದವ ನಾನು, ನೀನು ನನ್ನನ್ನು ಕ್ಷಮಿಸಿ ರಕ್ಷಿಸುವುದರಿಂದಲೇ ಧಾರುಣಿಯಲ್ಲಿ ನಿನ್ನ ಪ್ರತಾಪದ ಕೀರ್ತಿ ಹರಡಿದೆ ಎಂದು ವಿವರಿಸಲಾಗಿದೆ.)

ಪುರುಷೋತ್ತಮುಡ ನೀವು ಪುರುಷಾಧಮುಡ ನೇನು
ಧರಲೋ ನಾಯಂದು ಮಂಚಿತನಮೇದಿ

ಅನಂತಾಪರಾಧಮುಲು ಅಟುನೇಮು ಸೇಸೇದಿ
ಅನಂತಮಯಿನ ದಯ - ಅದಿ ನೀದಿ
ನಿನು ನೆರುಗಕುಂಡೇಟಿ ನೀಚಗುಣಮು ನಾದಿ
ನನು ನೆಡಯ ಕುಂಟೇ ಗುಣಮು ನೀದಿ

ಸಕಲಯಾಚಕಮ ಸರುಸ ನಾಕುಬನಿ
ಸಕಲ ರಕ್ಷಕತ್ವಮು ನದಿ ನೀಪನಿ
ಪ್ರಕಟಿಂಚಿ ನಿನ್ನು ದೂರೆ ಪಲುಕೆ ನಾಕೆಪ್ಪುಡುನು
ವೆಕಲಿವ್ಯೆ ನನು ಗಾಚೆ ವಿಧಮು ನೀದಿ

ನೇರಮಿಂದಯುನು ನಾದಿ ನೇರುಪಿಂತಯುನು ನೀದಿ
ಸಾರೆಕು ನಜ್ಞಾನಿ ನೇನು ಜ್ಞಾನಿವಿ ನೀವು
ಈ ರೀತಿ ಶ್ರೀವೆಂಕಟೇಶ! ಇಟ್ಟೇ ನನ್ನು ನೇಲಿತಿವಿ
ಧಾರುಣಿಲೋ ನಿಂಡೆನು ಪ್ರತಾಪಮು ನೀದಿ

೫

(ದೇವಿಗೆ ಹಾಲೆರೆದು ದೆಳಸಿದರೂ ಅದು ಸಿಹಿಯಾಗದು. ನಾಯಬಾಲವನ್ನು ನೆಟ್ಟಗೆ ಮಾಡಲು ಸಾಧ್ಯವೆ? ಕಾಯ ವಿಕಾರಗಳೂ ಹಾಗೆಯೇ. ಕೊಡಲಿಯನ್ನು ನೀರಿನಲ್ಲಿ ಮುಳುಗಿಸಿದರೆ ಮೆತ್ತಗಾಗದು. ಪಂಚ ಮಹಾಪಾತಕಗಳಿಂದ ಗಟ್ಟಿಯಾದ ಮನಸ್ಸು, ಪೆಟ್ಟು ತಿಂದರೇನು ಕೇಳುವುದೇ! ಚೇಳನ್ನು ಪ್ರೇಮದಿಂದ ಸೆರಗಿನಲ್ಲಿ ಕಟ್ಟಿಕೊಂಡರೂ ಕುಟುಕದೆ ಬಿಡದು, ಆದ್ದರಿಂದ ವೆಂಕಟೇಶನ ದಯೆಯನ್ನು ಆಶಿಸುವುದೇ ಉತ್ತಮೋತ್ತಮವೆನ್ನುತ್ತಾನೆ ಕವಿ.)

ಭಾರಮ್ಯೆನ ವೇಪಮಾನು ಪಾಲುಪೋಸಿ ಪೆಂಚಿನಾನು
ತೀರನಿ ಚೇದೇ ಗಾಕ ತೀಯ್ಯಗುಂಡೀನಾ

ಪಾಯದೀಸಿ ಕುಕ್ಕತೋಕ ಬದ್ದಲು ವೆಟ್ಟಿ ಬಿಗಿಸಿ
ಬಾಯಕೆಂತ ಗಟ್ಟಿನಾನು ಚಕ್ಕನುಂಡೀನಾ

ಕಾಯಪು ವಿಕಾರಮಿದಿ ಕಲಕಾಲಮುಜೆಪ್ಪಿನಾ
ಪೋಯಿನ ಪೋಕಲೇ ಕಾಕ ಬುದ್ದಿ ವಿನೀನಾ

ಮುಂಚಿ ಮುಂಚಿ ನೀಟಿಲೋನ ಮೂಲನಾನಬೆಟ್ಟುಕುನ್ನ
ಮುಂಚಿನ ಗೊಡ್ಡಲಿ ನೇಡು ಮೆತ್ತನಯ್ಯೇನಾ
ಪಂಚ ಮಹಾಪಾತಕಾಲ ಬಾರಿ ಬಡ್ಡ ಚಿತ್ತಮಿದಿ
ದಂಚಿ ದಂಚಿ ಚೆಪ್ಪಿನಾನು ತಾಕಿ ವಂಗೀನಾ

ಕೂರಿಮಿತೊ ತೇಲು ತೆಚ್ಚಿ ಕೋಕಲೋನ ಪೆಟ್ಟುಕೊನ್ನ
ಸಾರೆ ಸಾರೆ ಗುಟ್ಟು ಕಾಕ ಚಕ್ಕನುಂಡೀನಾ
ವೇರುಲೇನಿ ಮಹಿಮಲ ವೆಂಕಟೇಶ ವಿಭುನಿ ಕೃಪ
ಘೋರಮ್ಯೆನ ಆಸ ಮೇಲು ಕೊರಸೋಕೀನಾ

೬

(ಅಲಮೇಲು ಮಂಗಾದೇವಿಗೆ -- ಆಕೆ ಕ್ಷೀರಾಬ್ಧಿಕನ್ಯೆ ನೀರಜಾಲಯೆ, ಮಹಾಲಕ್ಷ್ಮಿ ಆಕೆಗೆ -- ಆರತಿಯೆತ್ತಿ ಹೇಳುತ್ತಿರುವ ಹಾಡು. ಆಕೆಯ ಅವಯವ ಶೋಭೆಗೆ ತಕ್ಕಂತೆ ಮುತ್ತುರತ್ನದ ಆರತಿಯ ವಿಧಾನಗಳನ್ನು ವಿವರಿಸುತ್ತಾನೆ ಕವಿ.)
ಕ್ಷೀರಾಬ್ಧಿ ಕನ್ಯಕಕು ಶ್ರೀ ಮಹಾಲಕ್ಷ್ಮಿಕಿನಿ
ನೀರಜಾಲಯಮುನಕು ನೀರಾಜನಂ

ಜಲಜಾಕ್ಷಿ ಮೋಮುನಕು ಜಕ್ಕವ ಕುಚಂಬುಲಕು
ನೆಲಕೊನ್ನ ಕಪ್ಪುರಪು ನೀರಾಜನಂ
ಅಲಿವೇಣಿ ತುರುಮುಲಕು ಹಸ್ತಕಮಲಂಬುಲಕು
ನಿಲವು ಮಾಣಿಕ್ಯಮುಲ ನೀರಾಜನಂ
ಚರಣಕಿಸಲಯಮುಲಕು ಸಕಿಯ ರಂಭೋರುಲಕು
ನಿರತಮಗು ಮುತ್ತೇಲ ನೀರಾಜನಂ
ಅರಿದಿ ಜಘನಂಬುನಕು ಅತಿವ ನಿಜನಾಭಿಕಿನಿ
ನಿರತಿ ನಾನಾವರ್ಣ ನೀರಾಜನಂ
ಸಗಟು ಶ್ರೀವೆಂಕಟೇಶು ಪಟ್ಟಪುರಾಣಿಯೈ
ನೆಗಡು ಸತಿಕಳಲುಕುನು ನೀರಾಜನಂ
ಜಗತಿ ನಲಮೇಲ್ಮಂಗ ಚಕ್ಕದಂಬುಲಕೆಲ್ಲ
ನಿಗಡು ನಿಜಶೋಭನಪು ನೀರಾಜನಂ

೭

(ಪ್ರಸಿದ್ಧವಾದ ಜೋಗಳದ ಹಾಡು ಇದು. ಆಂಧ್ರದವರೇ ಅಲ್ಲದೇ ಕನ್ನಡಿಗರೂ ಕವಿಯ ಹೆಸರು ತಿಳಿಯದೆ ಮಕ್ಕಳನ್ನು ಮಲಗಿಸಲು ತೊಟ್ಟಿಲಿನಲ್ಲಿಟ್ಟು ಹಾಡುತ್ತಾರೆ. ಬಾಲಕೃಷ್ಣನ ಲೀಲೆಗಳನ್ನೂ ವಿವರಿಸುತ್ತ ಮಗುವನ್ನು ತಟ್ಟಿ ಮಲಗಿಸುವ ಹಾಡಿಗೆ ಹೆಚ್ಚಿನ ವ್ಯಾಖ್ಯಾನ ದೇಕಿಲ್ಲ.)

ಜೋ ಅಚ್ಯುತಾನಂದ ಜೋ ಜೋ ಮುಕುಂದ
ರಾವೆ ಪರಮಾನಂದ ರಾಮಗೋವಿಂದ
ನಂದು ನಿಂಟನು ಚೇರಿ ನಯಮು ಮಾರಂಗ
ಚಂದ್ರ ವದನಲು ನೀಕು ಸೇವ ಚೇಯಂಗ
ನಂದಮುಗ ವಾರಿಂಡ್ಲ ನಾಡುಚುಂಡಂಗ
ಮಂದಲಕು ದೊಂಗ ಮಾಮುದ್ದುರಂಗ

ಪಾಲವಾರಾಶಿಲೊ ಪವಳಿಂಚಿನಾವು
ಬಾಲುಗಾ ಮುನುಲ ಕಭಯಮಿಚ್ಚಿನಾವು
ಮೇಲುಗಾ ವಸುದೇವುಕುದಯಿಂಚಿನಾವು
ಬಾಲುಡೈವುಂಡಿ ಗೋಪಾಲುಡೈನಾವು

ಅಟ್ಟುಗಟ್ಟಿನ ಮಾಗಡಟ್ಟೆ ತಿನ್ನಾಡೆ
ಪಟ್ಟಿ ಕೋಡಲು ಮೂತಿ ಪೈ ರಾಸಿನಾಡೆ
ಅಟ್ಟೆ ತಿನನನಿ ಅತ್ತಯಡುಗ ವಿನ್ನಾಡೆ
ಗಟ್ಟಿಗಾನಿದಿ ದೊಂಗ ಕೊಟ್ಟು ಮನ್ನಾಡೆ

ಗೊಲ್ಲವಾರಿಂಡ್ಲಕುನು ಗೊಬ್ಬುನಕು ದೋಯಿ
ಕೊಲ್ಲಲುಗಾ ತ್ರಾನಿ ಕುಂಡಲಸುನೇಯಿ
ಚೆಲ್ಲುನಾ ಮಗನಾಂಡ್ರ ಜೆಲಿಗಿಯಾಶಾಯಿ
ಚೆಲ್ಲತನಮುಲ ಸೇಯ ಜೆಲ್ಲುನಟವೋಯಿ

ರೇಪಲ್ಲೆ ಸತುಲೆಲ್ಲ ಗೋಪಂಬು ತೋನು
ಗೋಪೆಮ್ಮ ಮಾ ಕೊಡುಕು ಮಾ ಯಿಂಡ್ಲಲೋನು
ಮಾಪುಗಾನೇ ವಚ್ಚಿ ಮಾಮಾನಮುಲನು
ನೀ ಪಾಪಡೇ ಚೆರಚೆ ನೇಮಂದು ಮಮ್ಮ

ಒಕನಿಯಾಲಿನಿದೆಚ್ಚಿ ನೊಕನಿ ಕಡದೆಟ್ಟಿ
ಜಗಡಮುಲು ಗಲಿಗಿಂಚೆ ಸತಿಪತುಲಬಟ್ಟಿ
ಪಗಲು ನಲು ಜಾಮುಲನು ಬಾಲುಡೈನಟ್ಟಿ
ಮಗನಾಂಡ್ರ ಜೇಪಟ್ಟಿ ಮದನುಡೈನಟ್ಟಿ
ಅಂಗಜುನಿ ಗನ್ನ ಮಾಯನ್ನ ಇಟು ರಾರಾ
ಬಂಗಾರು ಗಿನ್ನೆಲೊ ಪಾಲು ಪೋಸೇರಾ



ದೊಂಗ ನೀವನಿ ಸತುಲು ಪೊಂಗುಚುನ್ನಾರಾ
ಮುಂಗಿಟನಾಡರಾ ಮೋಹನಾಕಾರಾ

ಗೋವರ್ಧಂಬೆಲ್ಲ ಗೊಡುಗುಗಾ ಬಟ್ಟಿ
ಕಾವರಮ್ಮುನನುನ್ನ ಕಂಸುಬಡಗೊಟ್ಟಿ
ನೀವು ಮಧುರಾಪುರಮು ನೇಲಜೇಪಟ್ಟಿ
ಠೀವಿತೋನೇಲಿನ ದೇವಕೀ ಪಟ್ಟಿ

ಅಂಗುಗಾವಾಳ್ಲಪಾಕನ್ನಯ್ಯ ಚಾಲ
ಶೃಂಗಾರ ಪರಮುಗಾ ಜೆಪ್ಪೆನೀ ಜೋಲ
ಸಂಗತಿಗ ಸಕಲ ಸಂಪದಲ ನೀವೇಳ
ಮಂಗಳಮು ತಿರುಪಟ್ಲ ಮದನಗೋಪಾಲ

೮

(ಬ್ರಹ್ಮ ಒಂದೇ ಎಂಬುದನ್ನು, ಪ್ರಕೃತಿ ನೀಡುವ ಜೀವನೋಪ ಯೋಗಿ ವಸ್ತುವಿಧಗಳೂ ಒಂದೇ ಎಂಬುದನ್ನು ವಿವರಿಸಿ ಸಮಾನ ತೆಯನ್ನು ಸಾಧಿಸಬಯಸುವ ಕೀರ್ತನೆಯಿದು. ಎಲ್ಲರ ಆತ್ಮದಲ್ಲಿರು ವವನೂ ಆ ಹರಿಯೇ ಎಂದಾಗ ಮೇಲುಕೀಳಿನ ಭಿನ್ನಭಾವಗಳಿಗೆ ಅವಕಾಶವಿಲ್ಲ.)

ಬ್ರಹ್ಮಮೊಕ್ಕಟೇ ಪರಬ್ರಹ್ಮಮೊಕ್ಕಟೆ ಪರ
ಬ್ರಹ್ಮಮೊಕ್ಕಟೇ ಪರಬ್ರಹ್ಮಮೊಕ್ಕಟೇ

ಕಂದುವಗು ಹೀನಾಧಿಕಮುಲಿಂದು ಲೇವು
ಅಂದರಿಕಿ ಶ್ರೀಹರೇ ಅಂತರಾತ್ಮ
ಇಂದುಲೊ ಜಂತುಕುಲ ಮಂತಾ ನೊಕಟೇ
ಅಂದರಿಕಿ ಶ್ರೀಹರೇ ಅಂತರಾತ್ಮ

ನಿಂಡಾರ ರಾಜು ನಿದ್ರಿಂಚು ನಿದ್ರಯುನೊಕಟೇ
ಅಂಡನೇ ಬಂಟು ನಿದ್ರ ಅದಿಯುನೊಕಟೇ
ಮೆಂಡೈನ ಬ್ರಾಹ್ಮಣುಡು ಮೆಟ್ಟುಭೂಮಿಯೊಕಟೇ
ಚಂಡಾಲುಡುಂಡೇಟಿ ಸರಿಭೂಮಿ ಯೊಕಟೇ

ಅನುಗು ದೇವತಲಕುನು ಅಲಕಾಮಸುಖ ಮೊಕಟೇ
ಘನ ಕೀಟಪಶುವುಲಕು ಕಾಮಸುಖಮೊಕಟೇ
ದಿನ ಮಹೋರಾತ್ರಮುಲು ತೆಗಿ ಧನಾಢ್ಯುನಕೊಕಟೇ
ವೊನರ ನಿರುಪೇದಕುನು ನೊಕ್ಕಟೇ ಅವಿಯು

ಕೊರಲಿ ಶಿಷ್ಟಾನ್ನಮುಲಗೊನುನಾಕಲೊಕಟೇ
ತಿರುಗು ದುಷ್ಟಾನ್ನಮುಲಕು ತಿನುನಾಕಲೊಕಟೇ
ಪರಗ ದುರ್ಗಂಧಮುಲಪೈ ವಾಯುವೊಕಟೇ
ವರುಸ ಬರಿಮಳಮುಪೈ ವಾಯುವೊಕಟೇ

ಕಡಗಿ ಯೇನುಗುಮೀದ ಗಾಯುಯೆಂಡೊಕಟೇ
ಪುಡಮಿ ಶುನಕಮು ಮೀದ ದೊಲಯುನೆಂಡೊಕಟೇ
ಕಡುಪುಣ್ಯುಲನು ಬಾಪ ಕರ್ಮುಲನು ಸರಿಗಾವ
ಜಡಿಯು ಶ್ರೀ ವೆಂಕಟೇಶ್ವರು ನಾಮಮೊಕಟೇ

(ಶ್ರೀ ವೆಂಕಟೇಶ್ವರನ ಅಭಯ ಹಸ್ತವನ್ನು ವಿವರಿಸುವ ನೆಪದಲ್ಲಿ ದಶಾವತಾರಗಳನ್ನೂ ವಿವರಿಸುವ ಕೃತಿ.)

ಇಂದರಿಕಿ ನಭಯಂಬು ಲಿಚ್ಚು ಚೇಯಿ
ಕಂದುವಗು ಮಂಚಿ ಬಂಗಾರು ಚೇಯಿ

ವೆಲಲೇನಿ ವೇದಮುಲು ವೆದಕಿ ತೆಚ್ಚಿನ ಚೇಯಿ
ಚೆಲುಕು ಗುಬ್ಬಲಿ ಕಿಂದ ಚೇರ್ಚು ಚೇಯಿ
ಕಲಿಕಿಯಗು ಭೂಕಾಂತ ಕೌಗಿಲಿಂಚಿನ ಚೇಯಿ
ವಲನೈನ ಕೊನಗೋಳ್ಳ ವಾಡಿ ಚೇಯಿ

ತನಿವೊಕ ಬಲಿಚೇತ ದಾನಮಡಿಗಿನ ಚೇಯಿ
ಒನರಂಗ ಭೂದಾನ ಮೊಸಗಿನ ಚೇಯಿ
ಮುನಸಿ ಜಲನಿಧಿಯಮ್ಮುಮೊನಕು ದೆಚ್ಚಿನ ಚೇಯಿ
ಯೆನಯ ನಾಗೇಲು ಧರಿಯಿಂಚು ಚೇಯಿ

ಪುರಸತುಲ ಮಾನಮುಲ ಪೊಲ್ಲ ಚೇಸಿನ ಚೇಯಿ
ತುರಗಂಬು ಬರವೆಡಿ ದೊಡ್ಡ ಚೇಯಿ
ತಿರುವೆಂಕಟಾಧೀಶುಡೈ ಮೋಕ್ಷಂಬು
ತೆರುವ ಪ್ರಾಣುಲಕೆಲ್ಲ ದೆಲಿಪೆಡಿ ಚೇಯಿ

೧೦

(ಅರಿಷಡ್ವರ್ಗ ಮನದಲ್ಲಿರುವುದು ಸಹಜ. ಆದರೆ ಅನ್ನಮಾ ಚಾರ್ಯ ಅವುಗಳನ್ನೂ ಮೋಕ್ಷ ಸಾಧನೆಯ ಸೂತ್ರಗಳನ್ನಾಗಿಸಿರು ವುದು ಈ ಕೀರ್ತನೆಯ ವೈಶಿಷ್ಟ್ಯ. ಇಲ್ಲಿನ ನಾಯಕ (ನಾಯಕಿಯೂ ಆಗಬಹುದು) ದೈವಕಾಮಿ, ದೈವವಿರೋಧ ಕೋಪಿ, ದೈವಸಾಧನ ಸಂಪತ್ ಲೋಭಿ, ಹರಿರೂಪ ಮೋಹಿ. ದೈವ ದಾಸ್ಯ ಮದ, ದೈವ ದೂರ ವಿದ್ಯಾಮಾತ್ಸರ್ಯ ಹೊಂದಿ ದೆಳೆದಿದ್ದಾನೆ. ಹಾಗಾಗಿ ಎಲ್ಲ ಕರ್ಮಗಳಲ್ಲೂ ವೆಂಕಟೇಶನ ಕೈಂಕರ್ಯದಲ್ಲಿಯೇ ಇದ್ದಾನೆ.)

ಇಟುವಂಟಿನೆಲ್ಲಾ ನೀಕೇ ಯಿಟ್ಟೇ ಸೆಲವು ಸೇಸಿತಿ
ತಟುಕುನ ನೀವನೇ ನಿಧಾನಮು ಚೇಕೊಂಟಿನಿ

ಕಾಮಿಂಚಿತಿನಾತ್ಮ ನಿನ್ನು ಗಲಸಿ ಭೋಗಿಂಚುಟಕು
ನೇ ಮರು ಗ್ರೋಧಿಂಚಿತಿ ನೀ ವಿರೋಧುಲಪೈ
ನೇಮಮುನ ಲೋಭಿಂಚಿತಿ ನೀ ಮಂತ್ರಮನ್ನುಲಕಿಯ್ಯ
ಆಮುಕೊನಿ ಮೋಹಿಂಚಿತಿ ಹರಿ ನೀ ರೂಪುನಕು

ಎರುಕತೋ ಮದಿಂಚಿತಿ ಇಟ್ಟೆ ನೀ ದಾಸ್ಯಮುನ
ಮರಿ ನಿನ್ನೊಲ್ಲನಿ ಚದುವು ಮಚ್ಚರಿಂಚಿತಿನಿ
ತರಿಜಲಪಟ್ಟಿತಿ ನೀ ತಪ್ಪನಿ ಭಕ್ತಿಯಂದು
ವೆರವಕ ನಿನ್ನೊಲ್ಲನಿ ವಿಧುಲ ನಿಂದಿಂಚಿತಿ

ಕಲಕರ್ಮುಮುಲೆಲ್ಲ ನೀ ಕೈಂಕರ್ಯಮುನ ಪೆಟ್ಟಿತಿ
ಬಲು ಮಮಕಾರಮು ನೀ ಪೈಜೇರ್ಚಿತಿ
ಎಲಮಿ ಶ್ರೀ ವೆಂಕಟೇಶಾ ಯಿನ್ನಿಟಾ ನನ್ನೇಲಿತಿವಿ
ನಿಲಿಚಿನ ಕಾಲಮೆಲ್ಲ ನೀ ಸೇವೆ ಚೇಸಿತಿ

ಅನ್ನಮಾಚಾರ್ಯರ ಕಾವ್ಯ ರೀತಿಗೆ, ಧ್ವನಿಗೆ, ಶೈಲಿಗೆ, ರಸಕ್ಕೆ ಇದೊಂದು ಮಾದರಿ ಮಾತ್ರ. ಇಂತಹ ಕಾವ್ಯಸುಧೆಯ ಸಾಗರ ಆತ. ಕರಿಯು ಕನ್ನಡಿಯಲಡಗಿದಂತೆ ಈ ದರ್ಶನ.

**ಬಿ. ಎಸ್. ಎಸ್.**

* * * *

# ವಂದನೀಯ ಹನುಮಂತ

---ಅನಂತ ಚಿಂತಾಮಣಿ ಜೋಶಿಷೀ.

ಭರತವರ್ಷದಲ್ಲಿ ಹನುಮಂತನ ಉಪಾಸ ೆಯು ಅತ್ಯಂತ ವ್ಯಾಪಕವಾಗಿದೆ. ಹನುಮಂತನು ಲ್ಲ ಪ್ರಕಾರಗಳ ಅಮಂಗಳಗಳನ್ನು ದೂರೀಕರಿಸಿ ಲ್ಯಾಣವನ್ನು ನೀಡುತ್ತಾನಲ್ಲದೇ ಸಾಧುಸಂತ, ದೇವ ಗಳು--ಭಕ್ತರ ಹಾಗೂ ಧರ್ಮದ ರಕ್ಷಕನಾಗಿರು ವನು.

ಹನುಮಂತನು ಭಗವಾನ್ ಶ್ರೀರಾಮನ ಸರ್ವೋ ತ್ತಮ ದಾಸಭಕ್ತ ಮತ್ತು ಶ್ರೀರಾಮಪ್ರಭುವಿನ ಅಂತ ರಂಗ ಪಾರ್ಷದನಾಗಿರುವನು. ಪರಾತ್ಪರ ಪೂರ್ಣ ಶ್ರೀರಾಮನ ಅವತಾರ ಚತುರ್ವ್ಯೂಹಾತ್ಮಕವಾಗಿರದೆ ಪಂಚಾಯತನ ರೂಪದಲ್ಲಿ ಶಾಸ್ತ್ರಗಳಲ್ಲಿ ವರ್ಣಿತ ವಾಗಿವೆ. ಹನುಮಂತನು ರಾಮಭಕ್ತರ ಪರಮಾ ಧಾರ ರಕ್ಷಕನು ಹಾಗೂ ಶ್ರೀರಾಮಮಿಲನದ ಅಗ್ರ ದೂತನಾಗಿರುವನು. ಶ್ರೀರಾಮನ ನಾಮ ಕೀರ್ತ ನವಾದ ಸ್ಥಳದಲ್ಲಿಯೇ ತಕ್ಷಣದಲ್ಲಿ ಹನುಮಂತನು ಉಪಸ್ಥಿತನಾಗಿರುವನು.

ಹನುಮಂತನು ರುದ್ರ -- ಶಂಕರನ ಅವತಾರ ವಾಗಿರುವನು. ಶಿವನ ಆರಾಧನೆಯು ಗ್ರಾಮ ಗ್ರಾಮ ನಗರ ನಗರಗಳಲ್ಲಿ ಕಂಡುಬರುವಂತೆ ಹನು ಮಂತನ ಗುಡಿಗಳು ಎಲ್ಲೆಡೆಗೆ ಕಾಣಬಹುದು. ಮನೆ ಮನೆಯಲ್ಲಿ ಹನುಮಂತನ ಸ್ತೋತ್ರ ಭಜನೆ ನಡೆಯುತ್ತದೆ. ಹನುಮಂತನ ಕುರಿತು ಅನೇಕ ಸ್ತೋತ್ರ ಪಟಲ ಪದ್ಧತಿಗಳು ಶತನಾಮ ಸಹ ಸ್ರನಾಮ ಮೊದಲಾದ ಉಪಾಸನಾ ಅಂಗಗಳು ದೇಶದ ತುಂಬ ಪ್ರಚಲಿತದಲ್ಲಿದೆ. ಹನುಮಂತನು ಬ್ರಹ್ಮಚರ್ಯದ ಸಾಕ್ಷಾತ್ ಪ್ರತಿಮೂರ್ತಿಯಾಗಿರು ವನು. ಅವನ ಧ್ಯಾನ ಮಾಡುವುದರಿಂದ ನಿರ್ಮಲ ಅಂತಃಕರಣದಲ್ಲಿ ಭಕ್ತಿಯ ಸಮುದಯವಾಗುತ್ತದೆ. ಬಜರಂಗ ಬಲಿ ಹಾಗೂ ಮಹಾಬಲಿಯ ರೂಪ ದಲ್ಲಿ ಆದನು ಶಕ್ತಿ, ಬಲ, ವೀರ್ಯ ತೇಜಸ್ಸು ಸ್ಫೂರ್ತಿ ಯನ್ನು ಕೊಡುವನು.

ಬುದ್ಧಿರ್ಬಲಂ ಯಶೋಧೈರ್ಯಂ
ನಿರ್ಭಯತ್ವಮರೋಗತಾ
ಅಜಾಡ್ಯಂ ವಾಕ್ಪಟುತ್ವಂ ಚ
ಹನುಮತ್ ಸ್ಮರಣಾತ್ ಭವೇತ್

ಈ ಶ್ಲೋಕವು ಹನುಮಂತನ ಮಹತ್ತತೆಯನ್ನು ಸವಿವರವಾಗಿ ತಿಳಿಸುತ್ತದೆ.

ಸಮಸ್ತ ಅಮಂಗಲದ ವಿನಾಶಕ, ಮಂಗಲ ಮೂರ್ತಿ ಭಕ್ತವರ ಶ್ರೀ ಹನುಮಂತನ ಚರಿ ತ್ರೆಯು ಪರಮಪವಿತ್ರ, ಪರಮ ಆದರ್ಶ, ಕಲ್ಯಾಣಮ ಯವೂ ಆಗಿದೆ. ಬ್ರಹ್ಮಾದಿ ಪುರಾಣದನುಸಾರವಾಗಿ ವೃಷಾಕಪಿ ಅಂದರೆ ಶಿವವಿಷ್ಣುವಿನ ತೇಜೋಮಯ ದಿವ್ಯವಿಗ್ರಹಧಾರೀ ದೇವತೆಯ ರೂಪದಲ್ಲಿ ಹನು ಮಂತನು ನಿರೂಪಿತನಾಗಿರುವನು. ಎಲ್ಲ ಪುರಾಣ ಹಾಗೂ ವಿವಿಧ ರಾಮಾಯಣಗಳ ಪ್ರಕಾರ ವೈವ ಸ್ವತ ಮನ್ವಂತರ ಇಪತ್ನಾಲ್ಕನೆಯ ತ್ರೇತಾಯುಗದಲ್ಲಿ ಅಂಜನಾ ಎಂಬ ಅಪ್ಸರೆಯಿಂದ ಕೇಸರಿಯ ಮಗ ನಾಗಿ ಅವತರಿಸಿದ್ದರಿಂದ ಕೇಸರೀನಂದನ ಅಥವಾ ಅಂಜನೇಯ ಎಂದು ಕರೆಯುವರು. ವಾಯು ವಿನ ಅಂಶದಿಂದ ಉತ್ಪನ್ನವಾಗಿದ್ದರಿಂದ ವಾಯು ಪುತ್ರ ಪವನ ಪುತ್ರ, ಶ್ರೀರಾಮನ ಸೇವೆ ಮಾಡುವು ದರಿಂದ ರಾಮದೂತ ಎನ್ನುವರು. ಅರ್ಜುನನ ರಥದ ಧ್ವಜದ ಮೇಲೆ ಇದ್ದು ಹುಂಕಾರ ಮಾತ್ರ ದಿಂದ ಮಹಾಭಾರತದ ವೀರರನ್ನು ಪ್ರಾಣಸ್ತಬ್ಧಗೊ ಳಿಸಿದ್ದರಿಂದ ಫಲ್ಗುಣ ಸಖ ಎಂದು ಖ್ಯಾತನಾಗಿರು ವನು. ತೀವ್ರಗತಿಯಿಂದ ಸಮುದ್ರ ಲಂಘನ ಮಾಡಿ ದ್ದರಿಂದ ಉದಧಿಕ್ರಮಣ ಎನ್ನುವರು. ಎಂದೂ ಪರಾಜಿತನಾಗದೆ ಇದ್ದದ್ದರಿಂದ ಅಪರಾಜಿತನಾಗಿ ರುವನು.

ವಾಯುಪುತ್ರ ಹನುಮಂತನು ಸೂರ್ಯನನ್ನು ಹಣ್ಣೆಂದು ತಿಳಿದು ಆಗಸಕ್ಕೆ ನೆಗೆದ ವೃತ್ತಾಂತ ಎಲ್ಲ ರಿಗೆ ಚಿರಪರಿಚಿತವಾಗಿದೆ. ವಾಲ್ಮೀಕೀಯ ರಾಮಾ ಯಣದನುಸಾರವಾಗಿ ಆಂಜನೇಯನು ಅಧ್ಯಯನ ಕ್ಕಾಗಿ ಸೂರ್ಯನಲ್ಲಿಗೆ ಹೋದನು. ಅಲ್ಲಿ ಆತನು ಸಾಂಗೋಪಾಂಗವಾಗಿ ಎಲ್ಲ ವೇದಗಳನ್ನು ಸರಹಸ್ಯ ಸಮಸ್ತ ಆಗಮಗಳನ್ನು ಪುರಾಣ ನೀತಿ ಅರ್ಥಶಾಸ್ತ್ರ ದರ್ಶನಗಳನ್ನು ಓದಿ ಅರಗಿಸಿಕೊಂಡನು. ವಾಲ್ಮೀಕಿ ರಾಮಾಯಣದಲ್ಲಿ ಸ್ವಯಂಭಗವಾನ್ ರಾಮನು ಹನುಮಂತನ ವಾಕ್ಪಟುತ್ವ ವ್ಯಾಕರಣ ಜ್ಞಾನವನ್ನು ಮುಕ್ತಕಂಠದಿಂದ ಪ್ರಶಂಸೆಯನ್ನು ಮಾಡಿರುವನು.

ಸೀತೆಯು ಎಲ್ಲಿದ್ದಾಳೆ ಎಂಬುದನ್ನು ಹನುಮಂತ ನೊಬ್ಬನೇ ಕಂಡು ಹಿಡಿಯಲು ಸಮರ್ಥ ಎಂಬುದು ಶ್ರೀರಾಮನಿಗೆ ಗೊತ್ತಿದ್ದಿತು. ಅದರಿಂದಲೇ ಹನು ಮಂತನನ್ನು ತನ್ನ ಬಳಿಗೆ ತರೆದು ತನ್ನ ಹೆಸರನ್ನು



ಬಿಜಾಪುರದ ಶ್ರೀ ಜಬರದಸ್ತ ಹನುಮಾನ್ ಮಂದಿ
ಚಿತ್ರ -- ಸ್ವ. ರಂ. ಕುಲಕರ್ಣಿ,

ಕೊರೆದ ಮುದ್ರಿತೆಯನ್ನು ನೀಡಿದನು. ಋಷಿಶಾಪದಿಂದ ಅಭಿಶಪ್ತಗೊಂಡ ಹನುಮಂತನು ಕೂಡ ಜಾಂಬವಂತನ ಮೂಲಕ ಶಕ್ತಿಯನ್ನು ನೆನೆಸಿದ ಕೂಡಲೇ ಬಲವು ಬಂದಿತು. ವಿರಾಟರೂಪ ಧರಿಸಿ ಸಮುದ್ರವನ್ನು ಕುಶಲತೆಯಿಂದ ದಾಟಿ ಸೀತೆಯನ್ನು ಗುರುತಿಸಿ ಮುದ್ರಿಕೆಯನ್ನು ನೀಡಿದನು. ಜೊತೆಗೆ ಪ್ರತ್ಯಭಿಜ್ಞಾನದ ರೂಪದಲ್ಲಿ ಚೂಡಾಮಣಿಯನ್ನು ಕೊಂಡು ರಾವಣನ ಬಲವನ್ನು ತಿಳಿಯಲು ಅಶೋಕವಾಟಿಕಾಧ್ವಂಸ ಲಂಕಾದಹನ -- ಅಗಣಿತ ರಾಕ್ಷಸ ಯೋಧರುಗಳನ್ನು ವಧಿಸಿ ಸಮುದ್ರವನ್ನು ದಾಟಿ ಸುರಕ್ಷಿತವಾಗಿ ಭಗವಾನ್ ಶ್ರೀರಾಮನ ಹತ್ತಿರ ಹನುಮಂತನು ತಲುಪಿದನು. ಭಗವಾನ್ ಶ್ರೀರಾಮನು ಇವರ ಬುದ್ಧಿಕೌಶಲ್ಯ ಮತ್ತು ಪರಾಕ್ರಮವನ್ನು ನೋಡಿ ಆಶ್ಚರ್ಯ ಚಕಿತನಾಗಿ ಅವನನ್ನು ಸಮ್ಮಾನಿತಗೊಳಿಸಿ ತನ್ನ ದೇವ ದುರ್ಲಭ ಆಲಿಂಗನವನ್ನು ನೀಡಿದನು.

ಹನುಮಂತನ ಹೇಳಿಕೆಯ ಪರಾಮರ್ಶದಿಂದ ಲಂಕಾ ವಿಜಯದ ಯೋಜನೆಯನ್ನು ರೂಪಿಸಿದನು. ಕುಂಭಕರ್ಣ ಇಂದ್ರಜಿತ್ತು ರಾವಣ ವಧೆಗೆ ಹನುಮಂತನು ಅನೇಕ ವಿಧದಲ್ಲಿ ಶ್ರಮಿಸಿದ್ದಾನೆ. ರಾವಣವಧೆಯ ನಂತರ ವನವಾಸದ ಅವಧಿ ಮುಗಿಯ ಹತ್ತಿತು. ಭರತನ ನೆನಪು ಬಂದಿತು. ತುಸು ವೇಳೆ ಕಳೆದರೆ ಭರತನು ಪ್ರಾಣತ್ಯಾಗ ಮಾಡಬಹುದು. ಹೀಗಾಗಿ ಶ್ರೀರಾಮನು ಧ್ರುತಗಾಮಿ ಹನುಮಂತನನ್ನು ತತ್ಕಾಲದಲ್ಲಿ ಅಯೋಧ್ಯೆಗೆ ಕಳುಹಿಸಿ ಸೂಚನೆಯನ್ನು ತಿಳಿಸಿದನು. ಆ ಮೇಲೆ ಅಯೋಧ್ಯೆಯಲ್ಲಿ ಶ್ರೀರಾಮ ರಾಜ್ಯಾಭಿಷೇಕದ ನಂತರ ಪ್ರಾಯಶಃ ಸುಗ್ರೀವ ಜಾಂಬುವಂತ ಅಂಗದಾದಿ ಎಲ್ಲವರೂ ತಿರುಗಿ ಮರಳಿದರೂ ಕೂಡ ರಾಮನ ಸಂಗಡ ಹನುಮಂತನು ಉಳಿದನು. ಪ್ರಸಿದ್ಧ ರಾಮರಕ್ಷಾ ಎಂಬ ಸ್ತೋತ್ರದಲ್ಲಿ

ದಕ್ಷಿಣೇ ಲಕ್ಷ್ಮಣೋಯಸ್ಯ
ವಾಮೇಚ ಜನಕಾತ್ಮಜಾ
ಪುರತೋ ಮಾರುತಿರ್ಯಸ್ಯ
ತಂ ವಂದೇ ರಘುನಂದನಮ್

ಈ ರೀತಿ ನಿರೂಪಿಸಿದ್ದಾರೆ. ಇತಿಹಾಸ ಪುರಾಣಗಳನುಸಾರವಾಗಿ ಭಗವಾನ್ ಶ್ರೀರಾಮನ ೧೧೦೦೦ ವರ್ಷಗಳ ತನಕ ಶಾಸನಗೈದು ರಾಮರಾಜ್ಯ ಸ್ಥಾಪಿಸಿದನು.

ಭಗವಂತನ ಆಜ್ಞೆಯ ಪ್ರಕಾರ ಶ್ರೀ ಹನುಮಂತನು ಕಿಂಪುರುಷ ವರ್ಷದಲ್ಲಿದ್ದುಕೊಂಡು ರಾಮ ಮಂತ್ರದ ಜಪವನ್ನು ಮಾಡುತ್ತಿರುತ್ತಾನೆ. ಅವನನ್ನೇ ಧ್ಯಾನಿಸುತ್ತಿರುವ ಅಲ್ಲಿಯ ನಿವಾಸಿಗಳು ಹಾಗೂ ಇತರ ಋಷಿ ಮುನಿ ಗಂಧರ್ವರು ಸಿದ್ಧ ವಿದ್ಯಾಧರರು ಮೊದಲಾದವರಿಗೆ ರಾಮನ ಅಮೃತಮಯ ಕಥೆಯನ್ನು ಕೇಳಿಸುತ್ತ ಇದ್ದು ಭಕ್ತರ ಕಲ್ಯಾಣವನ್ನು ಮಾಡುತ್ತಿರುತ್ತಾನೆ. ಮಹಾರಾಜ ಪರೀಕ್ಷಿತನಿಗೆ ಶುಕದೇವನು ಕೂಡ ಶ್ರೀಮದ್ಭಾಗವತದಲ್ಲಿ ಈ ತಥ್ಯವನ್ನೇ ಮನದಟ್ಟು ಮಾಡಿರುವನು. ಎಲ್ಲಿ ರಾಜನೇ ಕಿಂಪುರುಷವರ್ಷದಲ್ಲಿ ಶ್ರೀ ಲಕ್ಷ್ಮಣನ ಅಣ್ಣ ಆದಿಪುರುಷ ಸೀತಾ ಹೃದಯಾಭಿರಾಮ ಭಗವಾನ್ ಶ್ರೀರಾಮನ ಚರಣಗಳ ಸನ್ನಿಧಿಗೆ ರಸಿಕ ಪರಮ ಭಾಗವತ ಶ್ರೀ ಆಂಜನೇಯನು ಅನ್ಯ ಕಿಂಪುರುಷರ ಸಹಿತ ಅವಿಚಲ ಭಕ್ತಿಭಾವದಿಂದ ಉಪಾಸನೆ ಗೈಯುತ್ತಿರುವನು. ಅಲ್ಲಿ ಇತರ ಗಂಧರ್ವರೂ ಸಹಿತ ಅವರ ಒಡೆಯನ, ಭಗವಾನ್ ರಾಮನ ಪರಮ ಕಲ್ಯಾಣಮಯ ಗುಣಗಾಥೆ ಹಾಡುತ್ತಿರುತ್ತಾರೆ. ಶ್ರೀ ಹನುಮಂತನು ಅದನ್ನು ಕೇಳುತ್ತಾನೆ ಅಲ್ಲದೆ ಶ್ರೀರಾಮನನ್ನು ಸ್ತುತಿಸಿರುವನು.

ಸಿಂಧೂರದ ವಿಷಯವು ಇಂತಿದೆ -- ಸಿಂಧೂರದಲ್ಲಿ ಅಸ್ಥಿ ಹಾಗೂ ವ್ರಣಸಂಧಾನದ ಅದ್ಭುತ ಶಕ್ತಿಯಿದೆ. ಆಯುರ್ವೇದದ ಅನುಸಾರವಾಗಿ ಸಿಂಧೂರ ರಸ ಏವಂ ಸಿಂಧೂರಾದಿ ತೈಲ ಎಲ್ಲ ಪ್ರಕಾರದ ವ್ರಣ ವಿಸ್ಫೋಟದ ಸಂಧಾನದಲ್ಲಿ ಅದ್ಭುತರೂಪದಿಂದ ಕೆಲಸಗೈಯುತ್ತದೆ. 'ರಾಜ್ಯಾಭಿಷೇಕದ ನಂತರ ಎಲ್ಲ ಜನರು ದರಬಾರದಲ್ಲಿ ಕುಳಿತಾಗ ಭಗವಾನ್ ಶ್ರೀರಾಮನು ಎಲ್ಲರಿಗೆ ಕೆಲ ವಸ್ತ್ರ ಆಭರಣ ರತ್ನ ಇತ್ಯಾದಿಗಳನ್ನು ನೀಡುವನು. ಆತನು ಒಂದು ದಿವ್ಯ ಹಾರವನ್ನು ಸೀತೆಗೆ ಕೊಟ್ಟನು. ಜಗನ್ಮಾತಾ ಸೀತೆಯು ಈ ದಿವ್ಯಹಾರವನ್ನು ಹನುಮಂತನ ಕೊರಳಿಗೆ ಹಾಕಿದಳು. ಹನುಮಂತ ಇದು ವಿಚಿತ್ರವೆನಿಸಿತು. ಆಗ ಹನುಮಂತನು ಆ ಮಾಲೆಯನ್ನು ತೆಗೆದು ಅದನ್ನು ತುಂಡು ಮಾಡಿ ಒಂದೊಂದೇ ಮಣಿಯನ್ನು ತೆಗೆದು ನೋಡಹತ್ತಿದನು. ಅಯೋಧ್ಯೆಯ ದರಬಾರಿನವರು ಇದನ್ನು ನೋಡಿ ನಕ್ಕರು. ಪ್ರತಿಯಾಗಿ ಹನುಮನೂ ತನ್ನ ದೇಹವನ್ನು ವಿದೀರ್ಣಗೊಳಿಸಿದಾಗ ಆತನ ಇಡೀ ದೇಹದಲ್ಲಿ ಸೀತಾರಾಮರ ಹೆಸರು ಹಾಗೂ ದಿವ್ಯ ರೂಪವು ಎಲ್ಲರಿಗೆ ಕಾಣಹತ್ತಿತು. ಸೀತಾಮಾತೆಯು ಹನುಮಂತನನ್ನು ನೋಡಿ ಭಗ್ನಗೊಂಡ ಅವನ ದೇಹವನ್ನು ಜೋಡಿಸಿ ಸಿಂಧೂರವನ್ನು ಲೇಪಿಸಿ ಸುಗಂಧಿತ ಶೋಭಿತನನ್ನಾಗಿ ಮಾಡಿದರು. ಭಗವತೀ ಸೀತೆಯ ಪ್ರಸಾದರೂಪದಲ್ಲಿ ಸಿಂಧೂರಗ್ರಹಣ ಮಾಡಿದ್ದರಿಂದ ಸಿಂಧೂರವು ಹನುಮಂತನಿಗೆ ಪ್ರಿಯವಾಯಿತು. ಹನುಮಂತನು ಇದರ

ಲೇಪನದಿಂದ ಸೀತಾರಾಮರ ನೆನಪಿನ ಜೊತೆಗೆ ಬಹು ಪ್ರಸನ್ನನಾಗಿರುತ್ತಾನೆ. ಸಿಂಧೂರವು ಮಾಂಗಲಿಕ ಮತ್ತು ಸೌಭಾಗ್ಯ ದ್ರವ್ಯವಾಗಿದ್ದು ಇದರ ಧಾರಣದಿಂದ ಸೀಮಂತಿನೀ ಸ್ತ್ರೀಯ ಪತಿಯ ಆಯುಷ್ಯದ ಅಭಿವೃದ್ಧಿಯಾಗುತ್ತದೆ. ಭಗವತೀ ಸೀತಾಮಾತೆಯು ಕೂಡ ಸದಾ ಶ್ರದ್ಧಾಪೂರ್ವಕ ಸಿಂಧೂರ ಧಾರಣ ಮಾಡುತ್ತಿದ್ದಳು. ಒಮ್ಮೆ ಹನುಮಂತನು ಸೀತೆಯೊಂದಿಗೆ ಕೇಳುತ್ತ -- ಅಮ್ಮಾ ನೀನು ಶ್ರದ್ಧಾಪೂರ್ವಕವಾಗಿ ನನ್ನ ತಲೆಯ ಮೇಲೆ ಏಕೆ ಸಿಂಧೂರ ಹಚ್ಚುತ್ತಿಯೆ? ಎಂದಾಗ ಸೀತಾಮಾತೆಯು "ವತ್ಸ, ಇದರ ಧಾರಣದಿಂದ ನಿನ್ನ ಸ್ವಾಮಿಯ ಆಯುಸ್ಸು ಹೆಚ್ಚುತ್ತದೆ" ಎಂದು ಹೇಳಿದಾಗ ತನ್ನ ಮೈಮೇಲೆ ತುಂಬ ಸಿಂಧೂರವನ್ನು ಹಚ್ಚಿಕೊಂಡು ಪುನಃ ಉಪಸ್ಥಿತನಾಗಿ -- ಅಮ್ಮಾ ನೋಡಿ ನಮ್ಮ ಸ್ವಾಮಿಯ ಆಯುಸ್ಸು ನಿಜವಾಗಿಯೂ ಹೆಚ್ಚುವುದು ಅಲ್ಲವೇ". ಸ್ವಾಮಿಯ ಆಯುರ್ವೃದ್ಧಿಗಾಗಿ ನಾನು ಸಮಗ್ರ ದೇಹದ ಮೇಲೆ ಈ ಸೌಭಾಗ್ಯ ಏವಂ ಸುಮಂಗಲ ದ್ರವ್ಯವನ್ನು ಧರಿಸುತ್ತೇನೆ ಎನ್ನುವನು.

ಆಂಜನೇಯನ ಉಪಾಸನೆಯ ಕುರಿತು ಅನೇಕ ಸ್ವತಂತ್ರ ಗ್ರಂಥಗಳಿವೆ. ಆನಂದ ರಾಮಾಯಣದಲ್ಲಿ ಹನುಮಂತನ ಕವಚ ಪಟಲ ಸ್ತೋತ್ರಗಳಿವೆ. ನಾರದಾದಿ ಪುರಾಣ ಹಾಗೂ ಯಾಮಲಗ್ರಂಥಗಳಲ್ಲಿ ಮತ್ತು ಹನುಮದುಪಾಸನಾ ಎಂಬ ಗ್ರಂಥದಲ್ಲಿ ವಿಸ್ತೃತ ಉಪಾಸನಾ ಪದ್ಧತಿಯು ಪ್ರಾಪ್ತವಾಗಿದೆ. ಆಂಜನೇಯನ ಉಪಾಸನೆಯಿಂದ ರಾಮ ಭಕ್ತಿಯೂ, ಪ್ರಸನ್ನತೆಯಿಂದ ವಾದಜಯ ಯುದ್ಧದಲ್ಲಿ ವಿಜಯ ಪುಷ್ಟಿ ಏವಂ ರಾಜ್ಯ ಪ್ರಾಪ್ತಿ, ದೀರ್ಘ ಆಯುಷ್ಯ ಏವಂ ಸರ್ವಾಭ್ಯುದಯ, ಕಲ್ಯಾಣದ ಪ್ರಾಪ್ತಿಯಾಗುತ್ತದೆ. ಶಾರದಾ ತಿಲಕೋಕ್ತ ಅಷ್ಟಾದಶಾಕ್ಷರ ಮಂತ್ರವು ಸರಲ ಸುಂದರವೂ ವಿಶೇಷ ಪ್ರಭಾವಶಾಲಿಯೂ ಆಗಿದೆ. ಓಂ ನಮೋ ಭಗವತೇ ಆಂಜನೇಯಾಯ ಮಹಾಬಲಾಯ ಸ್ವಾಹಾ ಎಂಬ ಅಕ್ಷರಗಳ ಮಂತ್ರವಿದು. ಆಂಜನೇಯನ ಪ್ರಸನ್ನತೆಗಾಗಿ ವಾಲ್ಮೀಕಿಯ ರಾಮಾಯಣ, ಅಧ್ಯಾತ್ಮ ರಾಮಾಯಣ, ಸುಂದರಕಾಂಡ, ಪಾಠ ರಾಮಚರಿತ ಮಾನಸಪಾಠ ಪಾರಾಯಣ ನಡೆಯುತ್ತದೆ. ಪ್ರತಿ ಮಂಗಳ ಹಾಗೂ ಶನಿವಾರದಂದು ಆಂಜನೇಯನ ಮಂದಿರಗಳಲ್ಲಿ ಭಯಭಕ್ತಿಯಿಂದ ಭಕ್ತ ಭಜಕರು ದರ್ಶನ ಕೊಳ್ಳುತ್ತಾರೆ. ಹನುಮಂತನು ಈ ದರ್ಶನಾರ್ಥಿಗಳ ಮನೋಭಿಲಾಷೆಗಳನ್ನು ಪೂರ್ಣಗೊಳಿಸುತ್ತಾನೆ. ದಕ್ಷಿಣ ಹಾಗೂ ಪಶ್ಚಿಮ ಭಾರತದಲ್ಲಿಯ ಮಾರುತಿಯ ಮಂದಿರಗಳಲ್ಲಿ ಬಾಲಾಜಿ ಹೆಸರಿನಿಂದ ಪೂಜಿತಗೊಳ್ಳುವನು. ಚೈತ್ರ ಪೂರ್ಣಿಮೆ ಹಾಗೂ ಕೆಲವರ ಪ್ರಕಾರ (ಕಾರ್ತಿಕ) ಆಶ್ವೀಜ ಕೃಷ್ಣ ಚತುರ್ದಶಿಯಂದು ಹನುಮಜ್ಜಯಂತ್ಯುತ್ಸವ ಆಚರಿಸಲಾಗುತ್ತದೆ. ಯಾವುದೇ ರೂಪದಲ್ಲಿ ಶ್ರದ್ಧೆ ಏವಂ ಉಪಾಸನಾಪೂರ್ವಕ ಧ್ಯಾನಿಸುವುದರಿಂದ ಭಗವದತ್‌ಭಕ್ತಿಯೂ ಸಕಲ ಸಿದ್ಧಿಯೂ ಪ್ರಾಪ್ತವಾಗುತ್ತದೆ. ಹೀಗೆ ಶ್ರೀ ಹನುಮಂತನು ಸರ್ವಪ್ರಕಾರಗಳಲ್ಲಿ ಸರ್ವದಾ ಪೂಜ್ಯನೂ ವಂದ್ಯನೂ ಮತ್ತು ಸ್ಮರಣೀಯನಾಗಿದ್ದಾನೆ.

# ಶ್ರೀ ಕೂರತ್ತಾಳ್ವಾನ್

—ಕಂದಾಡೈ ಕೇಶವನ್.

ೀಮದ್‌ಭಗವದ್ ರಾಮಾನುಜರ ಪಟ್ಟ ಶಿಷ್ಯ ಕೂರೇಶರು ಅಥವಾ ಕೂರತ್ತಾಳ್ವಾನ್ ು ಪ್ರಸಿದ್ಧರಾದ ಶ್ರೀವತ್ಸ ಚಿಹ್ನ ಮಿಶ್ರರು ಪ್ರಮು . ಕಾಂಚೀಪುರದ ಹತ್ತಿರ ಇರುವ ಕೂರಗ್ರಹಾರ ುವ ಹಳ್ಳಿಯಲ್ಲಿ ತೈಮಾಸ ಹಸ್ತ ನಕ್ಷತ್ರದಲ್ಲಿ ಜನಿ ು. ವಾತ್ಸಗೋತ್ರದವರಾದ ಇವರು ಆಗರ್ಭ ುಂತರ ಮನೆಯಲ್ಲಿ ಜನಿಸಿ ಅಪಾರವಾದ ಜ್ಞಾನ ್ಲ ಪಾಂಡಿತ್ಯವನ್ನು ಹೊಂದಿ ಭಕ್ತಿ ವೈರಾಗ್ಯ ನವನ್ನು ತಮ್ಮ ಹೆಂಡತಿಯಾದ ಆಂಡಾಳಮ್ಮನ ತೆಯಲ್ಲಿ ಕಳೆಯುತ್ತಿದ್ದರು. ತಮ್ಮ ಐಶ್ವರ್ಯದ ು ಭಾಗವನ್ನು ಶ್ರೀ ವೈಷ್ಣವರಿಗೆ ಬಡವರಿಗೆ ಪ್ರತಿ ದಾನ ಮಾಡುತ್ತಾ ಅನ್ನ ಕೈಂಕರ್ಯದಲ್ಲಿ ನಿರತ ದ್ದರು. ಇವರು ಏಕಸಂಧಿಗ್ರಾಹಿಯಾಗಿದ್ದರು. ರಾಮಾನುಜರು ಸನ್ಯಾಸ ಸ್ವೀಕರಿಸಿದ ಮೇಲೆ ಿತವಂಶದ ಕೂರೇಶರು, ಕಂದಾಡೈ ವಂಶದ ದಲಿಯಾನ್‌ಡಾನ್ ರಾಮಾನುಜರಲ್ಲಿ ಪ್ರಪತ್ತಿ ್ನು ಹೊಂದಿ ಅವರ ಶಿಷ್ಯವರ್ಗಕ್ಕೆ ಸೇರಿದವ ಮೊದಲಿಗರು. ಇವರಿಬ್ಬರಿಗೂ ಪ್ರಥಮತಃ ಚ ಸಂಸ್ಕಾರ ಮಾಡಿ ಗುರುಪರಂಪರಾ ಪ್ರಕಾರ ುಮಂತ್ರವನ್ನು ರಹಸ್ಯಾರ್ಥಗಳನ್ನೂ ರಾಮಾ ಜರು ಉಪದೇಶ ಮಾಡಿ ವೈಷ್ಣವ ದೀಕ್ಷೆಯನ್ನು ಿದರು. ಕಾಂಚೀಪುರದ ಶ್ರೀ ವರದರಾಜಸ್ವಾ ಯ ಅಪ್ಪಣೆಯಂತೆ ರಾಮಾನುಜರು ಮೊದ ಯಾನ್‌ಡಾನ್ ಜೊತೆ ಶ್ರೀರಂಗಕ್ಕೆ ಹೊರಟಾಗ ುಗಳ ಅಪ್ಪಣೆಯಂತೆ ಕೂರೇಶರು ಕಾಂಚಿಯಲ್ಲಿ ತರು. ಒಂದುದಿನ ಎಂದಿನಂತೆ ರಾತ್ರಿವ ೂ ದಾನ ಧರ್ಮಗಳನ್ನು ಮಾಡಿ ವಿಶ್ರಾಂತಿ ತೆಗೆ ಕೊಳ್ಳಲು ತಮ್ಮ ಮನೆಯ ಕಬ್ಬಿಣದ ಬಾಗಿಲು ಕಲು ಕೂರೇಶರು ತಮ್ಮ ಪರಿಚಾರಕ ವರ್ಗದ ಗೆ ಅಪ್ಪಣೆಕೊಟ್ಟರು. ಪರಿಚಾರಕರು ಬಾಗಿಲು ುಚ್ಚುವಾಗ ಅದರ ಶಬ್ದ ವರದರಾಜರ ಮಹಿಷಿ ಶ್ರೀದೇವಿಗೆ ಕೇಳಿಸಿತು. ಆಗ ಆ ಜಗನ್ಮಾತೆ ತಾನು ಳಿದ ಶಬ್ದಕ್ಕೇನು ಕಾರಣವು ಎಂಬುವುದಾಗಿ ಪಕ್ಕ ಲ್ಲಿದ್ದ ಕಾಂಚೀಪೂರ್ಣರನ್ನು ಕೇಳಿದಳು. ಕಾಂಚೀ ರ್ಣರು "ಹೇ ವರದನಾಯಕಿ, ಮಾತೆ, ಉಷಃಕಾ ದಿಂದ ಮಧ್ಯರಾತ್ರಿವರೆಗೂ ಕೂರೇಶರೆಂಬ ಭಗ ದ್ಭಕ್ತರು ಬಡವರಿಗೆ ಅನ್ನ ವಸ್ತ್ರ ದಾನ ಮಾಡು ್ತರೆ. ಪರಿಚಾರಕರು ಸ್ವಲ್ಪ ವಿಶ್ರಾಂತಿ ತೆಗೆದುಕೊ ಲು ತಮ್ಮ ಮನೆಯ ದಿಡ್ಡೀಬಾಗಿಲನ್ನು ಮುಚ್ಚು ್ತರೆ. ಬಾಗಿಲಿನ ತಿರುಗುಣೆ ಶಬ್ದವು ನೀವು ಕೇಳಿದ್ದು" ಂಬುವುದಾಗಿ ವಿನಂತಿಸಿಕೊಂಡರು.

## ಕೂರೇಶರಿಗೆ ವೈರಾಗ್ಯ

ಕಾಂಚೀಪೂರ್ಣರಿಂದ ಕೂರೇಶರ ಮಹಿಮೆ ಯನ್ನು ಕೇಳಿ ಅಂತಹ ಮಹಿಮಾನ್ವಿತರನ್ನು ತಾನು ಕಾಣಬೇಕೆಂಬ ಹಂಬಲವನ್ನು ತಿಳಿಸಿದಳು. ಮಾತೆಯ ಅಪ್ಪಣೆಯಂತೆ ಕಾಂಚೀಪೂರ್ಣರು ಕೂರೇಶರ ಹತ್ತಿರ ಬಂದು ಮಾತೆ ಮಹಾಲಕ್ಷ್ಮಿಯು ಅಭಿಲಾಷೆಯನ್ನು ತಿಳಿಸಿದರು. ಆಗ ಕೂರೇಶರು "ಹೇ ಪರಮ ಪವಿತ್ರರಾದ ಮಹಾ ಕಾಂಚೀಪೂರ್ಣರೇ, ನಾನಾದರೋ ತಿಳಿಗೇಡಿ. ಮಾತೆ ನನ್ನ ಔದಾರ್ಯವನ್ನು ಹೊಗಳುವುದು ಎಂದರೇನು ? ನನ್ನನ್ನು ನೋಡುವ ಉತ್ಸುಕತೆ ತೋರುವುದೆಂದರೇನು? ಆಕೆ ಕಾರುಣ್ಯಮಯಿ. ನಾನು ಕಡುಮೂಢ. ಜಗನ್ಮಾತೆ ದರ್ಶನ ಕೊಡುತ್ತಾಳೆ ಎಂದರೆ ಅದು ನನ್ನ ಭಾಗ್ಯ" ಎಂಬುವುದಾಗಿ ಹೇಳಿ, ತಮ್ಮ ಮೈಮೇಲಿದ್ದ ಬೆಲೆಬಾಳುವ ವಸ್ತ್ರ ಆಭರಣಗಳನ್ನು ಎಸೆದು ಹಳೆಯ ಬಟ್ಟೆಗಳನ್ನು ತೊಟ್ಟು ತನ್ನ ದೇಹ ಮನಸ್ಸುಗಳೆರಡೂ ಐಶ್ವರ್ಯವೆಂಬ ಮದದ ಕೊಳೆಯಿಂದ ಮಲಿನವಾಗಿರುವುದರಿಂದ ತಮ್ಮ ಆಚಾರ್ಯರ ಶ್ರೀಪಾದತೀರ್ಥ ವೊಂದೇ ತಮ್ಮನ್ನು ಪವಿತ್ರಗೊಳಿಸಲು ಸಾಧ್ಯ ಎಂಬುವುದಾಗಿ ನಿಶ್ಚಯಿಸಿ ತಮ್ಮ ಎಲ್ಲಾ ಐಶ್ವರ್ಯವನ್ನು ದಾನಮಾಡಿ ವರದನ ಸನ್ನಿಧಿಗೆ ಬಂದರು. ಅಲ್ಲಿ ವರದರಾಜರನ್ನೂ ಮಹಾಲಕ್ಷ್ಮಿಯನ್ನು ಪೂಜಿಸಿ ಅವರ ಅಪ್ಪಣೆಯಂತೆ ತಮ್ಮ ಗುರುಗಳಾದ ರಾಮಾನುಜರನ್ನು ಕಾಣಲು ಪತ್ನೀ ಸಮೇತರಾಗಿ ಶ್ರೀರಂಗಕ್ಕೆ ಹೊರಟರು. ದಾರಿಯಲ್ಲಿ ಹೋಗುತ್ತಿರುವಾಗ ರಾತ್ರಿಯಾಯಿತು. ಪತ್ನಿ ಆಂಡಾಳಮ್ಮ ತಮಗೆ ಭಯವಾಗುತ್ತದೆಯೆಂದು ವಿಜ್ಞಾಪಿಸಿಕೊಂಡಳು. ಆಗ ಕೂರನಾಥರು ತಮ್ಮ ಪತ್ನಿಯನ್ನು ಕುರಿತು "ನಾವೇನು ಈಗ ಶ್ರೀಮಂತರೇ? ಶ್ರೀಮಂತರು ಭಯಪಡಬೇಕು. ನಾವೀಗ ಭಯಪಡಲು ಕಾರಣವೇನಿದೆ? ನಮ್ಮಲ್ಲಿ ಈಗ ಬೆಲೆಯುಳ್ಳ ಒಡವೆ ವಸ್ತುಗಳು ಇಲ್ಲವಲ್ಲ. ನಾವು ಹೊರಡುವಾಗ ಎಲ್ಲವನ್ನೂ ತ್ಯಾಗಮಾಡಿ ಹೊರಡುವಂತೆ ತಿಳಿಸಿದ್ದೆನಲ್ಲ. ನಿನ್ನಲ್ಲಿ ಏನಾದರೂ ಬೆಲೆಬಾಳುವ ವಸ್ತುಗಳು ಇವೆಯಾ? ಇದ್ದರೆ ಕಳ್ಳ ಕಾಕರ ಭಯವಷ್ಟೆ" ಎಂಬುವುದಾಗಿ ಹೇಳಿದರು. ಆಗ ಆಂಡಾಳಮ್ಮ ತಮ್ಮ ಪತಿಯ ಕ್ಷಮೆಯನ್ನು ಯಾಚಿಸಿ ತಾನು ತಮ್ಮ ಪತಿಗೇನಾದರೂ ನೀರಡಿಕೆಯಾದರೆ ನೀರು ಕುಡಿಯಲು ಒಂದು ಚಿನ್ನದ ಬಟ್ಟಲನ್ನು ತಂದಿರುವುದಾಗಿ ತಿಳಿಸಿದಳು. ಕೂರೇಶರು ಆ ಬಟ್ಟಲನ್ನು ಎಸೆಯುವಂತೆ ತಿಳಿಸಿದರು. ತನ್ನ ಉಡಿಯಲ್ಲಿದ್ದ ಬಟ್ಟಲನ್ನು ಪತಿಯ ಅಪ್ಪಣೆಯಂತೆ ಎಸೆದಳು. ಅವರಿಬ್ಬರೂ ಯಾವ ಭಯವಿಲ್ಲದೆ ಶ್ರೀರಂಗಕ್ಕೆ ಬಂದು ರಾಮಾನುಜರಲ್ಲಿ ಪ್ರಪತ್ತಿ ಹೊಂದಿ ಪ್ರತಿದಿನ ನಾಲ್ಕು ಮನೆಗಳಲ್ಲಿ ಭಿಕ್ಷೆ ಬೇಡಿ ತಂದ ಭಿಕ್ಷೆಯನ್ನು ತಾವೂ ತಮ್ಮ ಪತ್ನಿಯೂ ಭುಜಿಸಿ, ರಾಮಾನುಜರ ಕೈಂಕರ್ಯ, ಅವರಲ್ಲಿ ಕಾಲಕ್ಷೇಪ ಮಂತ್ರಾರ್ಥಗಳನ್ನು ತಿಳಿಯುವುದರಲ್ಲಿ ತಮ್ಮ ಕಾಲವನ್ನು ಕಳೆಯುತ್ತಿದ್ದರು.

## ಶ್ರೀರಂಗನ ಕರುಣೆ

ಒಂದು ದಿನ ವರ್ಷ ಋತು ದಿನವಿಡೀ ಮಳೆ ಬರುತ್ತಿತ್ತು. ಭಿಕ್ಷೆ ಬೇಡಲು ಕೂರೇಶರಿಗೆ ಆದಿನ ಹೊರಗೆ ಹೋಗಲಾಗಲಿಲ್ಲ. ಭಗವದಾರಾಧನೆ ಮಾಡಿ ತೀರ್ಥವನ್ನು ಮಾತ್ರ ಸ್ವೀಕರಿಸಿ ಅಂದು ಮಲಗಿದರು. ಅವರ ಪತ್ನಿ ಆಂಡಾಳಮ್ಮನಿಗೆ ಪತಿ ಅಂದು ಉಪವಾಸದಿಂದ ಮಲಗಿರುವುದನ್ನು ಕಂಡು ಯೋಚಿಸುತ್ತಾ ಸುಮ್ಮನೆ ಮಲಗಿದ್ದಳು ಅಷ್ಟರಲ್ಲಿ ಶ್ರೀರಂಗನಾಥನ ದೇವಸ್ಥಾನದ ದೊಡ್ಡ ಗಂಟೆ ಶಬ್ದ ಕೇಳಿಸಿತು. ಆಕೆ "ಹೇ ಪರಮಾತ್ಮಾ, ಶ್ರೀರಂಗನಾಥ, ನೀನು ಸುಖವಾಗಿ ನೈವೇದ್ಯವನ್ನು ಸ್ವೀಕರಿಸುತ್ತಿರುವಿಯಲ್ಲ ಇದು ನ್ಯಾಯವೆ?" ಎಂಬುವುದಾಗಿ ಮನಸ್ಸಿನಲ್ಲಿ ಚಿಂತಿಸಿದಳು. ಆ ಸಾಧ್ವಿಯ ಕೂಗು ಪ್ರಾರ್ಥನೆ ಭಗವಂತನನ್ನು ಮುಟ್ಟದಿರುವುದೆ? ಶ್ರೀರಂಗನಾಥ ಸ್ವಾಮಿಯು ತಮ್ಮಲ್ಲಿ ಕೈಂಕರ್ಯವನ್ನು ಮಾಡುತ್ತಿದ್ದ ಉತ್ತಮ ನಂಬಿಯ ಮನಸಿನಲ್ಲಿ ಕಾಣಿಸಿಕೊಂಡು "ಹೇ! ನಂಬಿ, ನನ್ನ ಭಕ್ತರಾದ ಕೂರೇಶರು ಪತ್ನಿಯೊಡನೆ ಹಸಿವಿನಿಂದ ಬಳಲುತ್ತಿದ್ದಾರೆ. ನೀವು ನನ್ನ ಪ್ರಸಾದವನ್ನು ತೆಗೆದುಕೊಂಡು ದೇವಸ್ಥಾನದ ಸಕಲ ಮರ್ಯಾದೆಗಳಿಂದ ಅವರ ಬಳಿಗೆ ಹೋಗಿ ನನಗೆ ನಿವೇದನೆಯಾದ ಮಹಾ ಪ್ರಸಾದವನ್ನು ಅವರಿಗೆ ಕೊಟ್ಟು ಬಾ" ಎಂದು ಹೇಳಿದನು. ಉತ್ತಮ ನಂಬಿಗಳು ಹಾಗೆಯೇ ಕೂರೇಶರಲ್ಲಿ ಬಂದು ಸ್ವಾಮಿಯ ಇಚ್ಛೆಯನ್ನು ತಿಳಿಸಿದರು. ಕೂರೇಶರಿಗೆ ಪರಮಾಶ್ಚರ್ಯ. ತಮ್ಮ ಮನೆ ಮುಂದೆ ದೇವಸ್ಥಾನದ ಪರಿಚಾರಕರು ನಿಂತಿದ್ದಾರೆ. ಅವರೂ ಪ್ರಸಾದಕ್ಕಾಗಿ ಕಾಯುತ್ತಿರಬಹುದು. ತಾವು ಸ್ವಾಮಿ ಕಳುಹಿಸಿದ ಪ್ರಸಾದವನ್ನೆಲ್ಲಾ ಸ್ವೀಕರಿಸಿದರೆ, ಪರಿಚಾರಕರಿಗೆ ಕಡಮೆ ಬೀಳಬಹುದು. ಸ್ವೀಕರಿಸದಿದ್ದರೆ ಮಹಾ ಅಪರಾಧ ಸ್ವಲ್ಪ ಹೊತ್ತು ಯೋಚಿಸಿ ಶ್ರೀರಂಗನಾಥನನ್ನು ಮನಸಾ ವಂದಿಸಿ ಎರಡು ತುತ್ತುಗಳನ್ನು ಸ್ವೀಕರಿಸಿ ಮಿಕ್ಕ ಪ್ರಸಾದವನ್ನು ಅಲ್ಲಿ ನೆರೆದಿದ್ದವರಿಗೆಲ್ಲಾ ವಿನಿಯೋಗಿಸುವಂತೆ ತಿಳಿಸಿ, ತಾವೊಂದು ತುತ್ತು ತಮ್ಮ ಪತ್ನಿಗೆ ಒಂದು ತುತ್ತು ಪ್ರಸಾದ ನೀಡಿ ಸಂತೃಪ್ತರಾದರು

ತಮ್ಮ ಪತ್ನಿಯನ್ನು ಕುರಿತು "ಆಂಡಾಳ್ ನಾನು ಉಪವಾಸದಿಂದ ಇರುವುದು ಸ್ವಾಮಿಗೆ ಯಾರು ತಿಳಿಸಿದರು" ಎಂಬುವುದಾಗಿ ಕೇಳಿದರು. ಆಕೆ ಎಲ್ಲಾ ವೃತ್ತಾಂತವನ್ನು ಬಿನ್ನವಹಿಸಿದಳು. ಕೂರೇಶರು ಪತ್ನಿಯನ್ನು ಕುರಿತು "ನೀನು ಹೀಗೆ ಮಾಡಬಾರದಾಗಿತ್ತು. ಈ ಅಲ್ಪ ವಿಷಯಗಳಿಗಾಗಿ ಭಗವಂತನನ್ನು ನಾವು ಪ್ರಾರ್ಥಿಸಬಾರದು ಎಂಬುವುದಾಗಿ ತಿಳಿಸಿದರು. ಮಾರನೆಯ ದಿನ ಶ್ರೀರಂಗನಾಥನು, ಕೂರೇಶರು ಎರಡು ಕವಳ ಪ್ರಸಾದವನ್ನು ಸ್ವೀಕರಿಸಿದ್ದರಿಂದ ಅವರಿಗೆ ಇಬ್ಬರು ಮಕ್ಕಳು ಹುಟ್ಟುತ್ತಾರೆಂದು ನಂಬಿಯ ಮುಖಾಂತರ ವಿಷಯ ತಿಳಿಸಿದನು.

ಈ ಇಬ್ಬರು ಮಕ್ಕಳೇ ದ್ವಯ ಮಂತ್ರದ ಪ್ರಭಾವದಿಂದ ಜನಿಸಿದ ಪರಾಶರ ಭಟ್ಟರು ಮತ್ತು ವ್ಯಾಸಭಟ್ಟರು. ಪರಾಶಭಟ್ಟರೆ ಮುಂದೆ ಯಾಮುನ ಮುನಿಗಳ ಇಚ್ಛೆಯಂತೆ ರಾಮಾನುಜರ ವಾಗ್ದಾನದಂತೆ ಶ್ರೀ ವಿಷ್ಣುಸಹಸ್ರನಾಮಕ್ಕೆ ಭಗವದ್ಗುಣದರ್ಪಣವೆಂಬ ವ್ಯಾಖ್ಯಾನವನ್ನು ಬರೆದ ಮಹಾನುಭಾವರು. ಶ್ರೀಗುಣರತ್ನ ಕೋಶ, ಶ್ರೀರಂಗರಾಜಸ್ತವ ಎಂಬುವ ಭಕ್ತಿ ಭಾವದಿಂದ ಕೂಡಿದ ಸ್ತೋತ್ರ ರತ್ನವನ್ನು ತಮ್ಮ ಕವಿತಾ ಪಾಂಡಿತ್ಯದಿಂದ ನೀಡಿದ ಮಹಾಪುರುಷರು. ಪರಾಶರ ಭಟ್ಟರ ಬಗ್ಗೆ ಉತ್ತಮ ನಂಬಿಗಳು ತಮ್ಮ ಲಕ್ಷ್ಮೀ ಕಾವ್ಯದಲ್ಲಿ--

ಪುತ್ರೀ ಕೃತೋ ರಂಗ ದುರಂಧರೇಣ
ಪರಾಶರೋ ಕೂರ ಕುಲ ಪ್ರದೀಪಃ
ಗೋವಿಂದ ಶಿಷ್ಯಃ ಸ ತು ಯಾಮುನಾರ್ಯ
ಮನೋರಥಂ ಪೂರಿತವಾನ್ ದ್ವಿತೀಯಃ
ಕೂರೇಶ ನಂದನಂ ವಂದೇ
ವ್ಯಾಸಾಂಶಂ ರಂಗವಾಸಿನಂ
ಅನೂರಾಧೇತು ವೈಶಾಖೇ
ಜಾತಂ ಶ್ರೀರಾಮ ದೇಶಿಕಂ

ಎಂಬುವುದಾಗಿ ಕೂರೇಶರ ಮಕ್ಕಳನ್ನು ಹೊಗಳಿದ್ದಾರೆ.

## ಶ್ರೀ ವೈಷ್ಣವದರ್ಶನ

ಕ್ರಿ.ಶ. ೧೧೧೩ ರಿಂದ ೧೧೨೮ ವರೆಗೆ ಚೋಳ ದೇಶವನ್ನು ವಿಕ್ರಮಚೋಳ ರಾಜನು ಆಳುತ್ತಿದ್ದನು. ಚೋಳದೇಶಕ್ಕೆ ಕಾಂಚೀಪುರವು ರಾಜಧಾನಿಯಾಗಿತ್ತು. ಇದೇ ಚೋಳದೇಶವನ್ನು ಕ್ರಿಮಿಕಂಠನೆಂಬ ಈ ವಿಕ್ರಮ ಚೋಳರಾಜ, ಶೈವ ಸಿದ್ಧಾಂತಪರವನ್ನಾಗಿ ಮಾಡಬೇಕೆಂಬ ಹಂಬಲದಿಂದ ಪಂಡಿತರ ಸಲಹೆ ಪಡೆದ. ಪಂಡಿತರು - ಶ್ರೀರಂಗದಲ್ಲಿರುವ ಶ್ರೀ ರಾಮಾನುಜರೂ ಅವರ ಗುರುಗಳು ಮಹಾಪೂರ್ಣರು ಶಿವನೇ ಪರತತ್ವವೆಂದು ಒಪ್ಪಿ ರಾಜರ ಸಮಕ್ಷದಲ್ಲಿ ಪತ್ರಿಕೆಗೆ ರುಜುಮಾಡಿದರೆ ಎಲ್ಲರೂ ಶೈವ ಸಿದ್ಧಾಂತವನ್ನು ಒಪ್ಪಿದಂತೆ --ಎಂಬುವುದಾಗಿ ತಿಳಿಸಿದರು. ಚೋಳದೇಶದ ರಾಜ ರಾಮಾನುಜರನ್ನು ಮಹಾಪೂರ್ಣರನ್ನು ಕರೆದು ತರುವಂತೆ ತನ್ನ ಸೈನಿಕರನ್ನು ಕಳುಹಿಸಿದನು. ಮಠಕ್ಕೆ ಬಂದ ಸೈನಿಕರನ್ನು ಕಂಡ ಕೂರೇಶರು ರಾಮಾನುಜರಿಗೆ ಏನೋ ಆಪತ್ತು ಕಾದಿರಬಹುದೆಂದು ಊಹಿಸಿ, ರಾಜಭಟರು ಬಂದ ಕಾರಣವನ್ನೂ ಊಹಿಸಿ, ಅಲ್ಲಿದ್ದ ಮೊದಲಿಯಾಂಡಾನ್ ಹಾಗೂ ಶ್ರೀ ರಾಮಾನುಜರ ಶಿಷ್ಯರಿಗೆ ರಾಮಾನುಜರನ್ನು ಕರೆದುಕೊಂಡು ಮೈಸೂರು ರಾಜ್ಯಕ್ಕೆ ಹೋಗಲು ತಿಳಿಸಿ ತಾವು ಕಾಷಾಯ ದರಿಸಿ ತ್ರಿದಂಡವನ್ನು ಹಿಡಿದು ತಾವೇ ರಾಮಾನುಜರೆಂದು ತಿಳಿಸಿ ಮಹಾಪೂರ್ಣರೊಡನೆ ರಾಜಾಸ್ಥಾನಕ್ಕೆ ಹೋದರು. ಕೂರೇಶರು ತಮ್ಮ ಪಾಂಡಿತ್ಯ ಪ್ರಭಾವದಿಂದ ನಾರಾಯಣನ ಪರಬ್ರಹ್ಮ ತತ್ವವನ್ನು ಪ್ರತಿಪಾದಿಸಿದರು. ಆದರೆ ರಾಜನು ಶಿವಾತ್ ಪರತರಂ ನಾಸ್ತಿ ಎಂಬುವುದಾಗಿ ಒಪ್ಪಿಗೆ ಪತ್ರಿಕೆಗೆ ರುಜುಮಾಡಲು ಬಲಾತ್ಕಾರ ಮಾಡಿದನು. ಕೂರೇಶರ ಶಿವಾತ್ ಪರತರಂ ನಾಸ್ತಿ ಎಂಬುವುದರ ಕೆಳಗಡೆ "ದ್ರೋಣಮಸ್ತಿ ತತಃ ಪರಂ" ಎಂಬುವುದಾಗಿ ಬರೆದರು. ಶಿವ ಹಾಗೂ ದ್ರೋಣ ಎಂಬ ಪದಗಳು ತೂಕದಲ್ಲಿ ಉಪಯೋಗಿಸುತ್ತಾರೆ ೧೬ ಸೇರು ಶಿವ ೩೨ ಸೇರು ದ್ರೋಣವೆಂಬ ಶ್ಲೇಷಾ

ಘದಲ್ಲಿ ಬರೆದು ಕೂರೇಶರು ರುಜುಮಾಡಿದರು. ಕೂರೇಶರ ನಡತೆಯಿಂದ ಕೋಪಗೊಂಡ ಚೋಳ ರಾಜನು ಕೂರೇಶರ ಕಣ್ಣನ್ನು ಕೀಳಲು ಆಜ್ಞಾಪಿಸಿದನು. ಕೂರೇಶರು ತಮ್ಮ ಕಣ್ಣನ್ನು ತಾವೇ ಕಿತ್ತುಕೊಂಡರು. ಮಹಾಪೂರ್ಣರೂ ರುಜು ಹಾಕಲು ಸಮ್ಮತಿಸಲಿಲ್ಲ. ರಾಜನು ಮಹಾಪೂರ್ಣರ ಕಣ್ಣುಗಳನ್ನು ಕೀಳಿಸಿದನು. ಕೂರೇಶರೂ ಮಹಾಪೂರ್ಣರೂ ರಕ್ತಸ್ರಾವದೊಡನೆ ಹೊರಗೆ ಬಂದರು. ವೃದ್ಧರಾದ ಮಹಾಪೂರ್ಣರು ಕೂರೇಶರ ತೊಡೆಮೇಲೆ ಮಲಗಿ ಪರಮಪದವನ್ನು ಸೇರಿದರು. ಕೂರೇಶರೂ ಮತ್ತು ಮಹಾಪೂರ್ಣರು ಶ್ರೀವೈಷ್ಣವ ದರ್ಶನದ ಉಳಿವಿಗಾಗಿ ತಮ್ಮ ದರ್ಶನ (ಕಣ್ಣುಗಳನ್ನು) ನೀಡಿ ಕೃತ ಕೃತ್ಯರಾದರು. ವಿಶಿಷ್ಟಾದ್ವೈತ ಮತದ ಎರಡು ಕಣ್ಣುಗಳಾಗಿ ವಿರಾಜಿಸುತ್ತಿದ್ದಾರೆ.

## ಗುರು--ಶಿಷ್ಯರು

ಎಲ್ಲರನ್ನೂ ಉದ್ಧಾರಮಾಡಲು ಬಂದ ಉದಾರಿ ಭಗವದ್ರಾಮಾನುಜರಂತಹ ಗುರುಗಳಿಲ್ಲ. ಕೂರತ್ತಾಳ್ವಾನಂತಹ ಚರಮ ಪರಮ ನಿಷ್ಠೆಯ ಶಿಷ್ಯರಿಲ್ಲ ಎಂಬುವುದು ಸಾವಿರಕ್ಕೆ ಸಾವಿರಪಾಲು ಸತ್ಯ. ರಾಮಾನುಜರಿಗೆ ಕೂರತ್ತಾಳ್ವಾನ್ ಕಂಡರೆ ಪರಮ ಪ್ರೀತಿ ವಾತ್ಸಲ್ಯ. ಅಂತೆಯೇ ಕೂರತ್ತಾಳ್ವಾನ್ ರಾಮಾನುಜರಿಗಿಂತ ಶ್ರೇಷ್ಠ ದೈವವಿಲ್ಲ, ಎಂಬುವುದಾಗಿ ನಂಬಿದ್ದವರು. ರಾಮಾನುಜರು ತಿರುನಾರಾಯಣ ಪುರಕ್ಕೆ ಹೋಗಿ ಸೇರಿದ ಮೇಲೆ, ಒಮ್ಮೆ ಶ್ರೀರಂಗನಾಥನ ಸೇವೆ ಮಾಡಬೇಕೆಂಬ ಆಸೆಯಿಂದ ಇವರು ಶ್ರೀರಂಗಕ್ಕೆ ಬಂದರು. ಅಲ್ಲಿ ಕಾವಲಿದ್ದ ಸೈನಿಕರು ವೃದ್ಧರಾದ ಕೂರೇಶರನ್ನು ಕಂಡು ಕನಿಕರಗೊಂಡು "ಸ್ವಾಮಿ ಇಲ್ಲಿ ರಾಮಾನುಜರ ಶಿಷ್ಯರನ್ನು ಯಾರೂ ಒಳಗೆ ಬಿಡಬಾರದೆಂದು ಅಪ್ಪಣೆ. ತಾವು ಒಳಗೆ ಹೋಗಿ. ಅಲ್ಲಿ ಯಾರಾದರೂ ವಿಚಾರಿಸಿದರೆ ನಾವು ರಾಮಾನುಜರ ಶಿಷ್ಯರಲ್ಲ ಎಂಬುವುದಾಗಿ ಹೇಳಿ ಎಂಬುವುದಾಗಿ ತಿಳಿಸಿ -- ಅವರನ್ನು ಒಳಗೆ ಬಿಡಲು ಸಮ್ಮತಿಸಿದನು. ಆದರೆ ರಾಮಾನುಜರಿಗೆ ಇಲ್ಲಿ ಮರ್ಯಾದೆ ಇಲ್ಲದಿದ್ದರೆ ಅಂತಹ ರಂಗನ ದರ್ಶನ ಸೇವೆ ಲಾಭ ನನಗೂ ಬೇಕಿಲ್ಲ. ಪರಮ ಗುರುಗಳಾದ ರಾಮಾನುಜರೇ ನನ್ನ ಸರ್ವಸ್ವ, ನನ್ನ ದೈವ. ಪರಮ ಇರಾಮಾನುಶ ಎಂ ಇರ್ಕೈಯವರ್ ಎಂಬುವುದಾಗಿ ತಿಳಿಸಿ ಹಿಂತಿರುಗಿದರು. ಕೂರೇಶರು ರಾಮಾನುಜರನ್ನು ತಿರುನಾರಾಯಣ ಪುರಕ್ಕೆ ಕಳುಹಿಸಿದಿದ್ದರೆ ಅವರ ಪ್ರಾಣಕ್ಕೂ ಅಪಾಯ ಒದಗಿ ಬರುತ್ತಿತ್ತು. ನಮಗೆ ರಾಮಾನುಜರು ಅನುಗ್ರಹ ತಿರುನಾರಾಯಣಪುರದಲ್ಲಿ ದೊರಕುತ್ತಿರಲಿಲ್ಲ. ಶೆಲ್ವನಾರಾಯಣನ ಸೇವೆಗೆ ನಾವು ಸೇರುತ್ತಿರಲಿಲ್ಲ.

ಕೂರೇಶರು ಕಣ್ಣುಗಳನ್ನು ಕಳೆದುಕೊಂಡ ವಿಷಯ ರಾಮಾನುಜರಿಗೆ ತಿಳಿದು ಬಹಳ ಸಂಕಟ ಪಟ್ಟರು. ಕಾರಣ ಅವರಿಗೆ ಹಿಂದಿನ ನೆನಪುಗಳು ಸ್ಮೃತಿ ಪಟಲದಲ್ಲಿ ಹಾದು ಹೋದವು. ಹಿಂದೆ ಶ್ರೀರಂಗದಲ್ಲಿ ಗೋಷ್ಠೀಪೂರ್ಣದಲ್ಲಿ ವೇದಾಂತ ತತ್ವಗಳನ್ನು ಅರಿಯಲು ಹದಿನೆಂಟು ಸಲ ಹೋಗಿ ನಿರಾಶರಾಗಿರಲು, ರಾಮಾನುಜರ ಮನೋನಿಶ್ಚಯವನ್ನು ಕಂಡು ರಾಮಾನುಜರು ತ್ರಿದಂಡ ಕಾಷಾಯದೊಡನೆ ತಮ್ಮ ಬಳಿಗೆ ಬರಲು ತಿಳಿಸಿದಾಗ, ತಾವು ಕೂರೇಶರನ್ನು ದಾಶರಥಿಯನ್ನು (ಮೊದಲಿಯಾಣ್ಡಾನ್) ತಮ್ಮೊಡನೆ ಕರೆದುಕೊಂಡು ಹೋಗಿ ಕೂರೇಶರು ತಮ್ಮ ಕಾಷಾಯವೆಂದೂ ಮೊದಲಿಯಾಣ್ಡಾನ್ ತಮ್ಮ ತ್ರಿದಂಡವೆಂದೂ ಗೋಷ್ಠೀಪೂರ್ಣರಲ್ಲಿ ವಿನಂತಿಸಿಕೊಂಡಾಗ ಮಂತ್ರ ರತ್ನವನ್ನೂ ರಹಸ್ಯಾರ್ಥಗಳನ್ನು ಬೋಧಿಸಿದಾಗ ಇದನ್ನು ಯಾರಿಗೂ ತಿಳಿಸಬಾರದೆಂದು ಗೋಷ್ಠೀಪೂರ್ಣರು ಆದೇಶಿಸಿದರೂ, ರಹಸ್ಯಾರ್ಥಗಳನ್ನು ಕೂರೇಶರಿಗೆ ಮಾತ್ರ ತಿಳಿಸುವುದಾಗಿ ರಾಮಾನುಜರು ಘೋಷಿಸಿದಾಗ ಗೋಷ್ಠೀಪೂರ್ಣರು ರಾಮಾನುಜರಿಗೆ ಶಿಷ್ಯನ ಮೇಲೆ ಇದ್ದ ಪ್ರೇಮವನ್ನು ಕಂಡು ಅವಾಕ್ಕಾದರು. ಇನ್ನೊಮ್ಮೆ ಕಾಶ್ಮೀರದಲ್ಲಿ ಬೋಧಾಯನ ವೃತ್ತಿಮಹಾಭಾಷ್ಯದ ಪ್ರತಿಯನ್ನು ರಾಮಾನುಜರೂ ಸಂಪೂರ್ಣವಾಗಿ ಓದಲು ಅವಕಾಶವಿಲ್ಲದಿರುವಾಗ ಏಕಸಂದಿಗ್ರಾಹಿಯಾದ ಕೂರೇಶರು ಅದನ್ನು ತಾವು ಓದಿ ಗ್ರಹಿಸಿರುವುದಾಗಿ ತಿಳಿಸಿದಾಗ ಯಾಮುನರಿಗೆ ತಾವು ಮಾಡಿದ ವಾಗ್ದಾನ ಈ ಶಿಷ್ಯನಿಂದ ನೆರವೇರುತ್ತೆ ಎಂಬ ಬರವಸೆ ಮೂಡಿಬಂದು ರಾಮಾನುಜರು ಆನಂದದಿಂದ ಕೂರೇಶರನ್ನು ಅಪ್ಪಿಕೊಂಡ ಸನ್ನಿವೇಶ ಜ್ಞಾಪಕಕ್ಕೆ ಬಂತು. ಮತ್ತೊಮ್ಮೆ ರಾಮಾನುಜರು ತಿರುವರಂಗತ್ತ ಮುದನಾರ್ ಎಂಬುವವರನ್ನು ಪಂಚ ಸಂಸ್ಕಾರ ವಿಧಿಗಳಿಂದ ಶ್ರೀ ವೈಷ್ಣವ ಸಮುದಾಯಕ್ಕೆ ಸೇರಿಸಿಕೊಂಡಿದ್ದರು. ಅವರಿಗೆ ಮಾತೃವಿಯೋಗವಾದಾಗ ಅವರ ಹನ್ನೊಂದನೆಯ ದಿನ ವರ್ಣಪಡೆಯಲು ಯಾವ ಶ್ರೀ ವೈಷ್ಣವರೂ ಮುಂದೆ ಬರಲಿಲ್ಲ. ಆಗ ರಾಮಾನುಜರು ಕೂರೇಶರನ್ನು ಈ ವಿಷಯವಾಗಿ ಪ್ರಸ್ತಾಪಿಸಿದಾಗ ತಾವೇ ನಿಂತು ಆ ದಿನದ ಕಾರ್ಯ ಕಲಾಪಗಳನ್ನು ನಿರ್ವಿಘ್ನವಾಗಿ ನೆರವೇರಿಸಿ ರಾಮಾನುಜರ ದಯೆಗೆ ಒಳಗಾದರು.

ಕಾಲಕ್ರಮೇಣ, ಚೋಳದೇಶದಲ್ಲಿ ರಾಜನ ನಿಧನ. ರಾಮಾನುಜರು ಶ್ರೀರಂಗಕ್ಕೆ ಶಿಷ್ಯರ ಆಸೆಯಂತೆ ಹಿಂತಿರುಗಿದರು. ಕೂರೇಶರು ರಾಮಾನುಜರ ಬಳಿಗೆ ಓಡಿಬಂದರು. ರಾಮಾನುಜರು ಕೂರೇಶರನ್ನು ಬಾಚಿ ತಬ್ಬಿ ಕಣ್ಣೀರಿಟ್ಟರು. ಮತ್ತೆ ಅವರೊಡನೆ ಕಾಂಚೀಪುರಕ್ಕೆ ಪ್ರಯಾಣ. ಅಲ್ಲಿ ವರದರಾಜನನ್ನು ಸ್ತುತಿಸಿ ಕಣ್ಣುಕೊಡುವಂತೆ ಬೇಡಲು ರಾಮಾನುಜರ ಆದೇಶ. ವರದರಾಜಸ್ತವ ಸ್ತುತಿಸಿ ವರದರಾಜನು ವರವನ್ನು ಎರಡು ಸಲ ಕೇಳಲು ಒಮ್ಮೆ ಪರಮ ಪದದಲ್ಲಿ ಇರುವ ಪರಮಾತ್ಮನನ್ನು ಮಾತ್ರ ನೋಡುವ ದಿವ್ಯ ಚಕ್ಷು ಕೊಡುವಂತೆ ವರ. ಮತ್ತೊಂದು ಸಲ ಆಗಿನ ಚೋಳದೇಶದ ರಾಜನಿಗೆ ಬಂದ ವ್ಯಾಧಿ ವಾಸಿಯಾಗುವಂತೆ ಬೇಡಿದ ವರ. ಇದನ್ನು ಕೇಳಿದ ಶ್ರೀರಾಮಾನುಜರು ತಾವೇ ವರದರಾಜನನ್ನು ಬೇಡಿದಾಗ ಕೂರೇಶರು ಶ್ರೀ ರಾಮಾನುಜರನ್ನೂ ಹಾಗೂ ಭಗವಂತನನ್ನೂ ಮಾತ್ರ ನೋಡುವ ದರ್ಶನ ಲಾಭವನ್ನು ಪಡೆದರು.

## ಕೂರೇಶರ ಚರಮಸ್ಥಿತಿ

ಕೂರೇಶರು ಪ್ರತಿನಿತ್ಯ ರಾಮಾನುಜರಲ್ಲಿ ಕಾಲಕ್ಷೇಪ. ವೇದ, ಉಪನಿಷತ್, ದ್ರಾವಿಡ ವೇದಗಳ ರಹಸ್ಯಾರ್ಥಗಳನ್ನು ಕೇಳುತ್ತಿದ್ದರೂ ತಮ್ಮ ಆಚಾರ್ಯರಿಗಿಂತ ಮುಂಚೆಯೇ ಪರಮಪದವನ್ನು ಸೇರಲು ಹಂಬಲ. ಹಾಗೆಯೇ ರಂಗನಾಥನಲ್ಲಿ ಬಿನ್ನಪ.

ಕೂರೇಶರ ಆಸೆಗೆ ರಂಗನಾಥನ ಸಮ್ಮತಿ. ಈ ವಿಷಯವನ್ನು ತಿಳಿದ ರಾಮಾನುಜರು ಆಳ್ವಾರ್ ಮಂಟಪದಲ್ಲಿ ತಂಗಿದ ಕೂರೇಶರ ಬಳಿ ಬಂದು "ಕೂರೇಶ, ನನಗಿಂತ ಮುಂಚಿತವಾಗಿ ಮುಕ್ತಿ ಬೇಡಲು ಕಾರಣವೇನು. ನೀನು ಹಿಂದಿನ ಸಂಪ್ರದಾಯವನ್ನು ಮುರಿಯುತ್ತಿರುವಿಯಲ್ಲ" ಎಂಬುವುದಾಗಿ ಕೇಳಲು, ಸ್ವಾಮಿ ಆ ಪರಮ ಪದದ ಒಂದು ನಿಯಮವನ್ನು ಅನುಸರಿಸಿ ನಾನು ಅಲ್ಲಿಗೆ ಮುಂದಾಗಿ ಹೋಗಿ ಸೇರಲು ನಿಶ್ಚಯಿಸಿದೆ. ಆಳ್ವಾರರ ಪ್ರಬಂಧದ "ಮೂಡಿಯುಡೈ" ಎಂಬ ಪಾಶುರದ ಪದ್ಧತಿಯಂತೆ ದೇವತೆಗಳು ಸ್ವರ್ಗದ ಬಾಗಿಲಿಗೆ ಬಂದು ಇಲ್ಲಿಂದ ಬರುವ ಕಿರಿಯರನ್ನು ಸ್ವಾಗತಿಸುತ್ತಾರೆ. ಆದರೆ ಅದು ಸರಿಕಾಣಲಿಲ್ಲ. ಶಿಷ್ಯರು ಮುಂಚಿತವಾಗಿ ಗುರುಗಳನ್ನು ಸ್ವಾಗತಿಸುವುದು ಸೂಕ್ತ. ನಿಮ್ಮ ಬರವಿಗಾಗಿ ಈ ದಾಸ ಕಾಯುತ್ತಿರುತ್ತಾನೆ ಎಂಬುವುದಾಗಿ ತಿಳಿಸಿ ಶ್ರೀ ರಾಮಾನುಜರ ಪಾದಪದ್ಮಗಳನ್ನು ಹಿಡಿದು--

"ಯೋ ನಿತ್ಯ ಮಚ್ಯುತ
ಪದಾಂಬುಜ ಯುಗ್ಮರುಕ್ಮ
ವ್ಯಾಮೋಹತ ಸ್ತದಿರಾಣಿ ತೃಣಾಯಮೇನೆ
ಅಸ್ಮತ್ ಗುರೋ ಭಗವತೋಸ್ಯ
ದಯೈಕಸಿಂದೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ"

ಎಂಬುವುದಾಗಿ ಸ್ತುತಿಸಿದರು. ಈ ಪವಿತ್ರವಾದ ಶ್ಲೋಕವನ್ನೇ ಪ್ರತಿಯೊಬ್ಬರೂ ದಿವ್ಯ ಪ್ರಬಂಧಗಳನ್ನು ಓದುವಾಗ ಪ್ರಾತಃಕಾಲದಲ್ಲಿ ದೇವಸ್ಥಾನಗಳಲ್ಲಿ ಪಠಿಸುವ ಸಂಪ್ರದಾಯ ಬೆಳೆದುಬಂತು. ರಾಮಾನುಜರು ತಮ್ಮ ಮಠಕ್ಕೆ ಹಿಂತಿರುಗಿದ ಮೇಲೆ ಕೂರೇಶರು ತಮ್ಮ ಮಕ್ಕಳನ್ನು ಕರೆದು, ಹೆಂಡತಿಯ ಅಪ್ಪಣೆಯನ್ನು ಪಡೆದು, ರಾಮಾನುಜರೇ ಎಲ್ಲರ ಚೇತನೋದ್ಧಾರಕರು. ಕಾಯಾ ವಾಚಾ ಮನಸ್ಸು ಶ್ರೀವೈಷ್ಣವರನ್ನು ನೋಯಿಸಬಾರದು ಎಂಬುವುದಾಗಿ ತಿಳಿಸಿ ತಲೆಯನ್ನು ಪಿಳ್ಳೈ ಆಳ್ವಾನ್ ತೊಡೆಯಮೇಲೆ ಕಾಲುಗಳನ್ನು ಆಂಡಾಳ್ ಅಮ್ಮಾಯಿ ತೊಡೆಯ ಮೇಲಿರಿಸಿ ಆಚಾರ್ಯನನ್ನು ಧ್ಯಾನಿಸುತ್ತಾ ಪರಮಪದವಿಯನ್ನು ಪಡೆದರು. ಅವರ ತನಿಯನ್ ಶ್ರೀ ರಾಮಾನುಜರು ಪಠಿಸಿದರು.

ಶ್ರೀ ವತ್ಸ ಚಿಹ್ನ ಮಿಶ್ರೇಭ್ಯೋ
ನಮ ಉಕ್ತಿ ಮಧೀಮಹಿ
ಯದುಕ್ತ ಯಸ್ತ್ರಯಾ ಕಂಠೇ
ಯಾಂತಿ ಮಂಗಳ ಸೂತ್ರತಾಂ
ಶ್ರೀ ಮತ್ ಕೂರ ಕುಲಾದೀಶಂ
ಶ್ರೀ ವತ್ಸಾಂಕ ಮುಪಾಸ್ಮಹೇ
ಅಗ್ರಂ ಯತೀಂದ್ರ ಶಿಷ್ಯಾಣಾಂ
ಆದ್ಯಂ ವೇದಾಂತ ವೇದಿನಾಂ

ಕೂರೇಶರು ಪರಮಪದವನ್ನು ಪಡೆದಾಗ ರಾಮಾನುಜರಿಗೆ ೧೧೦ ವರ್ಷ ವಯಸ್ಸಾಗಿತ್ತು.

## ಪಂಚಸ್ತವಗಳು

ಕೂರತ್ತಾಳ್ವಾನ್‌ರಿಂದ ರಚಿಸಲ್ಪಟ್ಟ ಪಂಚಸ್ತವಗಳಾದ ಶ್ರೀಸ್ತವ, ಸುಂದರಬಾಹುಸ್ತವ, ಅತಿಮಾನುಷ್ತವ, ವರದರಾಜಸ್ತವ ಮತ್ತು ಶ್ರೀ ವೈಕುಂಠಸ್ತವ ಅವರ ಪ್ರತಿಭೆ. ವಿದ್ವತ್ತು. ಗೂಢವಾದ ಶಾಸ್ತ್ರಗಳ ಅಧ್ಯಯನ, ಪೂರ್ವಾಚಾರ್ಯರ ದಿವ್ಯಪ್ರಬಂಧಗಳ, ರಹಸ್ಯಾರ್ಥಗಳ ಮಂಗಳ ದೀಪಗಳಾಗಿವೆ. ವೇದಗಳ ಕೊರಳಿಗೆ ಮಂಗಳ ಸೂತ್ರವಾಗಿವೆ. ಪರಾಭಕ್ತಿಯ ಭಾವಕಡಲಾಗಿವೆ. ಈ ಸ್ತೋತ್ರ ಜಾಲದಲ್ಲಿ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸಲಾಗಿದೆ. ಪರಮಾತ್ಮ ಜೀವಾತ್ಮ ಸ್ವರೂಪ. ಕೂರೇಶರು ಶ್ರೀರಂಗದಿಂದ ತಮ್ಮ ಕಣ್ಣುಗಳನ್ನು ಕಳೆದುಕೊಂಡು ತಿರುಮಾಲಿರುಂಶೋಲೈ ಬೆಟ್ಟಕ್ಕೆ ಹೋಗುತ್ತಾ ದಾರಿಯಲ್ಲಿ ನಾರಾಯಣನ ಸ್ಮರಣೆ ಮಾಡುತ್ತಾ ಶ್ರೀ ವೈಕುಂಠಸ್ತವವನ್ನು ರಚಿಸಿ ಹಾಡಿದರು. ಇಲ್ಲಿ ಅರ್ಥಪಂಚಕವನ್ನು ವಿವರಿಸಿದರು. ಶ್ರೀ ವೈಕುಂಠವೆಂಬ ಪರಲೋಕದಲ್ಲಿ ನಿತ್ಯರಿಂದಲೂ ಮುಕ್ತರಿಂದಲೂ ಸೇವಿಸಲ್ಪಟ್ಟ ಪರಮ ಪುರುಷನ ದಿವ್ಯ ಸ್ವರೂಪವನ್ನು ಕೊಂಡಾಡಿದ್ದಾರೆ. ರಾಮಾನುಜರು ತಿರುನಾರಾಯಣ ಪುರದಿಂದ ಶ್ರೀರಂಗಕ್ಕೆ ಹಿಂದಕ್ಕೆ ಬರುವವರೆಗೂ ಕೂರೇಶರು ತಿರುಮಾಲಿರುಂ ಶೋಲೈ ಕ್ಷೇತ್ರದಲ್ಲಿ ನೆಲೆಸಿದ್ದರು. ಅಲ್ಲಿ ನೆಲೆಸಿರುವ ಸುಂದರ ಬಾಹು ಪೆರುಮಾಳ್‌ನನ್ನು ಭಕ್ತಿಯಿಂದ ೧೩೨ ಪದ್ಯಗಳಿಂದ ಹಾಡಿದ್ದಾರೆ.

ಸುಂದರ ಬಾಹುಸ್ತವದ ಮೊದಲಿನ ಶ್ಲೋಕದಲ್ಲಿ ಕೂರೇಶರು ಶ್ರೀ ರಾಮಾನುಜರ ಶ್ರೀಪಾದಗಳನ್ನು ಆಶ್ರಯಿಸಿದ ತಮಗೆ ಸಕಲ ವೇದಾರ್ಥಗಳ ಜ್ಞಾನವನ್ನು ಪಡೆವ ಭಾಗ್ಯ ಲಭಿಸಿತೆಂದೂ, ತಾವು ನಿರ್ಭೀತರಾಗಿ ಸುಂದರ ಬಾಹುವನ್ನು ಅನನ್ಯ ಭಕ್ತಿಯಿಂದ ಭಜಿಸುವುದು ಶ್ರೀ ರಾಮಾನುಜರ ಪಾದ ಸಂದರ್ಶನಕ್ಕಾಗಿ ಹಾತೊರೆದು ಎಂಬುವುದಾಗಿ--

ಶ್ರೀಮಂತೌ ಹರಿಚರಣೌ
ಸಮಾಶ್ರಿತೋಽಹಂ
ಶ್ರೀ ರಾಮಾವರಜ ಮುನೀಂದ್ರ
ಲಬ್ಧ ಬೋಧಃ
ನಿರ್ಭೀತಃ ತತ ಇಹ ಸುಂದರಬಾಹುಂ
ಸ್ತೋಷ್ಯೇ ತಚ್ಚರಣ ವಿಲೋಕನಾಭಿಲಾಷೀ

ಸ್ವಾಮಿಯ ಸುಂದರವಾದ ಬಾಹುಗಳನ್ನು ವರ್ಣಿಸುವಾಗ ಆ ಬಾಹುಗಳು ಕ್ಷೀರಸಮುದ್ರವನ್ನು ಮಥನಮಾಡುವಾಗ ತನ್ನ ಸುಂದರ ತೋಳುಗಳಿಂದ ಮಥಿಸಿದ ಅದೇ ಸುಂದರ ತೋಳುಗಳು ಪಾರಿಜಾತ ವೃಕ್ಷಗಳ ಶಾಖೆಯಂತೆ ಶೋಭಿಸುತ್ತ ಶ್ರೀದೇವಿಯನ್ನು ಆಲಂಗಿಸುವ ಕಾರ್ಯದಲ್ಲೂ ಪ್ರಕಾಶಿಸುತ್ತಾ ಅನೇಕ ರೂಪಗಳನ್ನು ಪಡೆದುದಾಗಿ ವರ್ಣಿಸಿದ್ದಾರೆ. ಸ್ವಾಮಿಯ ಹಸ್ತ ದ್ವಯಗಳಲ್ಲಿ ಶಂಕುಚಕ್ರಗಳ ವರ್ಣನೆ ಅದ್ಭುತ ಅನುಪಮ. ಸ್ವಾಮಿಯ ವಕ್ಷಸ್ಥಲದ ವರ್ಣನೆಯಲ್ಲಿ ಲಕ್ಷ್ಮೀದೇವಿ. ಶ್ರೀವತ್ಸ ವನಮಾಲೆಯೂ ಅಸಾಧಾರಣವಾದ ಆಭರಣಗಳಾಗಿ ಕೂರೇಶರಿಗೆ ಕಾಣಿಸಿದಾಗ ಅವರು ಸ್ತೋತ್ರಮಂಜರಿ--

"ಲಕ್ಷ್ಮ್ಯಾಃ ಪದಂ ಕೌಸ್ತುಭ ಸಂಸ್ಕೃತಂ ಚ
ಶ್ರೀ ವತ್ಸ ಭೂಮಿಃ ವಿಮಲಂ ವಿಶಾಲಂ
ವಿಭೂತಿ ವಕ್ಷೋ ವನಮಾಲಯಾಢ್ಯಂ
ವನಾದ್ರಿನಾಥಸ್ಯ ಸು ಸುಂದರಸ್ಯ"

ಎಂಬುವುದಾಗಿ ಹರಿದು ಬಂದಿದೆ. ಕೂರೇಶರ ಅತಿಮಾನುಷಸ್ತವ ನಿಜವಾಗಿಯೂ ಅಪೂರ್ವ ಸ್ತೋತ್ರ ಮಾಲಿಕಾ. ಇಲ್ಲಿ ಶ್ರೀರಾಮಾನುಜರು ಮಾನವನಾಗಿದ್ದರೂ ಆತನು ಆಚರಿಸಿದ ಅತಿಮಾನುಷ ಕಾರ್ಯಗಳನ್ನು ಕೊಂಡಾಡಿದ್ದಾರೆ. ಇಲ್ಲಿ ೬೧ ಶ್ಲೋಕಗಳಲ್ಲಿ ಶ್ರೀರಾಮ, ಕೃಷ್ಣರ ದಿವ್ಯಲೀಲೆಗಳನ್ನು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸುಲಭವಾಗಿ ತಿಳಿದುಕೊಳ್ಳಲು ಸಹಾಯಕವಾಗಿ ಸರ್ವೇಶ್ವರನ ಕಲ್ಯಾಣಗುಣಗಳನ್ನು ಹಾಡಿದ್ದಾರೆ. ಮಾಯಾ ಜಿಂಕೆಯನ್ನು ಅಟ್ಟಿಸಿಕೊಂಡು ಹೋದ ರಾಮ ಸೀತೆಯನ್ನು ಕಳೆದುಕೊಂಡ ವೃತ್ತಾಂತವನ್ನು ಕುರಿತು. ರಾಮ ಸೀತೆ ಇರುವ ಸ್ಥಳ ನಿನಗೆ ತಿಳಿಯಲಿಲ್ಲವೆ. ಹಾಗಾದರೆ ಜಟಾಯುವಿಗೆ ಹೇಗೆ ಮೋಕ್ಷವನ್ನಿತ್ತೆ ಎಂಬುವುದಾಗಿ ಪ್ರಶ್ನಿಸುವ ಶ್ಲೋಕ--

ಪೃಚ್ಛಾಮಿ ಕಿಂಚನ ಯದಾಕಿಲ ರಾಘವತ್ವೇ
ಮಾಯಾ ಮೃಗಸ್ಯ ವಶಗೋ
ಮನುಜತ್ವ ಮೌಗ್ಧ್ಯಾತ್
ಸೀತಾ ವಿಯೋಗ ವಿವಶೋ ನ ಚತದ್ಗತಿಜ್ಞಃ
ಪ್ರಾದಾಸ್ತದಾ ಪರಗತಿಂ ಹಿ ಕಥಂ ಖಗಾಯ

ಹಾಗೆಯೇ "ನೈವಾಶ್ಯ ಜಿಜ್ಞಿತ" ಎಂಬುವ ಶ್ಲೋಕದಲ್ಲಿ ರಾಘವ ನೀನು ಸಮುದ್ರವನ್ನು ದಾಟುವ ಮುಂಚೆಯೇ, ರಾವಣನನ್ನು ಸಂಹರಿಸುವ ಮುನ್ನ ವಿಭೀಷಣನಿಗೆ ರಾಜ್ಯಾಭಿಷೇಕ ಮಾಡಿದಿಯಲ್ಲವೆ? ಇದು ಅತಿಮಾನುಷ ಕಾರ್ಯವಲ್ಲವೆ" ಎಂಬುವುದಾಗಿ ಸ್ವಾಮಿಯನ್ನು ಪ್ರಶ್ನಿಸಿದ್ದಾರೆ. ಶ್ರೀರಾಮಾನುಜರು ಕೂರೇಶರನ್ನು ಕಂಚಿಯ ವರದರಾಜನನ್ನು ಕಣ್ಣಿನದೃಷ್ಟಿ ಬರಲು ಪ್ರಾರ್ಥಿಸುವಂತೆ ಆದೇಶ ನೀಡಿದಾಗ ವರದರಾಜಸ್ತವದ ಮೊದಲಿನ ಶ್ಲೋಕ--

"ಸ್ವಸ್ತಿ ಹಸ್ತಗಿರಿ ಮಸ್ತ ಶೇಖರಃ
ಸಂತನೋತು ಮಯಿ ಸಂತತಂ ಹರಿಃ
ನಿಸ್ಸಮಾಭ್ಯಧಿಕ ಮಭ್ಯದತ್ತಯಂ
ದೇವ ಮೌಪನಿಷದೀ ಸರಸ್ವತೀ"

೧೦೨ ಶ್ಲೋಕಗಳ ಈ ವರದರಾಜಸ್ತವದಲ್ಲಿ ೨೩ನೇ ಶ್ಲೋಕದಲ್ಲಿ ತನಗೆ ಸ್ವಾಮಿಯ ದಿವ್ಯ ಮಂಗಳ ವಿಗ್ರಹದ ಸೌಂದರ್ಯವನ್ನು ಕಾಣುವ ಭಾಗ್ಯ ನೀಡಬೇಕೆಂದು ಪ್ರಾರ್ಥಿಸುವಾಗ ಹೀಗೆಂದು ಸ್ತುತಿಸಿದ್ದಾರೆ.

ನೀಲ ಮೇಘ ನಿಭ ಮಂಜನ ಪುಂಜ
ಶ್ಯಾಮಕುಂತಲಮನಂತ ಶಯಂ ತ್ವಾಂ
ಅಬ್ಜಪಾಣಿಪದ ಮಂಬುಜ ನೇತ್ರಂ
ನೇತ್ರಸಾತ್ಕುರು ಕರೀಶ ಸದಾತ್ವಂ

"ಸ್ವಸ್ತಿ ಶ್ರೀಃ ದಿಶತಾತ್ ಎಂಬ ಶ್ಲೋಕಗಳ ಶ್ರೀಸ್ತವದಲ್ಲಿ ಕೂರೇಶರು ಭಗವಂತನ ಪ್ರಾಪ್ತಿಗೆ ಪುರುಷಕಾರ ಭೂತೆಯಾದ ಮಹಾಲಕ್ಷ್ಮಿಯ ಅನುಗ್ರಹದ ಮಹಾತ್ಮೆಯನ್ನು ಶ್ಲಾಘಿಸಿದ್ದಾರೆ. ಶ್ರೀರಾಮಾನುಜರ ಅಂತರಂಗ ಶಿಷ್ಯರಾದ ಶ್ರೀ ಕೂರತ್ತಾಳ್ವಾನ್‌ರವರಿಗೆ ನಮೋನಮಃ.

★★★★★★★★★★

# ಗೃಹಸ್ಥಧರ್ಮಗಳು

--ಎಚ್. ವಿ. ನರಸಿಂಹಮೂರ್ತಿ.

ವ್ಯಕ್ತಿಯೊಬ್ಬನನ್ನು ಆಧ್ಯಾತ್ಮಿಕ ಪರಮ ಆದರ್ಶದ ಅರಿವಿನತ್ತ ಕ್ರಮ--ಕ್ರಮವಾಗಿ ಮುನ್ನಡೆಸಲು ಅನುಕೂಲಗೊಳಿಸುವಂತಹ ಕರ್ತವ್ಯಗಳ ಕ್ರಮಬದ್ಧ ಸರಣಿಯನ್ನೊಳಗೊಂಡ, ಜೀವನದ ನಾಲ್ಕು ಘಟ್ಟಗಳು ಆಶ್ರಮಗಳು. ಅವುಗಳ ಮೂಲಕ, ದೇಹ ಮತ್ತು ಮನಸ್ಸುಗಳ ಕಟ್ಟುನಿಟ್ಟಾದ ಶ್ರಮದಿಂದ, ಧಾರ್ಮಿಕ ಕಾರ್ಯಗಳಿಂದ, ಸ್ವಾರ್ಥತ್ಯಾಗ ಮತ್ತು ಆತ್ಮಸಂಯಮಗಳಿಂದ ವ್ಯಕ್ತಿಯು ತನ್ನನ್ನು ತಾನು ಸ್ವಾಧೀನಪಡಿಸಿಕೊಳ್ಳಬಲ್ಲನು. ಆದ್ದರಿಂದಲೇ ಡಾಯ್ಸನನು ಆಶ್ರಮಗಳನ್ನು 'ದೇಹದಂಡನೆಯ ಘಟ್ಟಗಳು' ಎಂದು ಅನುವಾದಿಸುತ್ತಾನೆ ಮತ್ತು 'ಜೀವನವು ಕ್ರಮ--ಕ್ರಮೇಣ ತೀವ್ರವಾಗುತ್ತಾ ಹೋಗುವ ವೈರಾಗ್ಯದ ವಿವಿಧ ಘಟ್ಟಗಳ ಮೂಲಕ ಹಾಯ್ದುಹೋಗಬೇಕು. ಆ ಮೂಲಕ ಒಬ್ಬ ವ್ಯಕ್ತಿಯು ಪ್ರಾಪಂಚಿಕ ಮೋಹದಿಂದ ಹೆಚ್ಚು--ಹೆಚ್ಚು ಪರಿಶುದ್ಧನಾಗಿ ತನ್ನ 'ಅಸ್ತ'ಕ್ಕೆ (ಮನೆಗೆ) ಹೆಚ್ಚು -- ಹೆಚ್ಚು ಅರ್ಹನಾಗಬೇಕು. ಋಗ್ವೇದದಷ್ಟು ಮೊದಲೇ ಆ ಇನ್ನೊಂದು ಜಗತ್ತನ್ನು ಅಸ್ತವೆಂದು ನಿರ್ದೇಶಿಸಲಾಗಿದೆ.

ಸಂಗಚ್ಛಸ್ವ ಪಿತೃಭಿಃ  
ಸಂಯಮೇನೇಷ್ಟಾ ಪೂರ್ತೇನ  
ಪರಮೇ ವ್ಯೋಮನ್  
ಹಿತ್ವಾಯಾವದ್ಯಂ ಪುನರಸ್ತಮೇಹಿ  
ಸಂಗಚ್ಛಸ್ವ ತನ್ವಾ ಸುವರ್ಚಾಃ

ಋ. ವೇ. x ೧೪--೮

ಭವ್ಯತೆಯಲ್ಲಿ ಈ ಆಲೋಚನೆಯನ್ನು ಸಮೀಪಿಸುವಂತಹ ಅಂಶವನ್ನು ಮಾನವತೆಯ ಸಮಸ್ತ ಇತಿಹಾಸವೂ ನಿರ್ಮಿಸಲಾರದು -- (The Philosophy of the Upanishads = P : 367) -- ಎಂದು ವಾಸ್ತವ ಸಂಗತಿಯನ್ನು ಹೇಳಿದ್ದಾನೆ.

ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸ -- ಎಂಬ ಈ ನಾಲ್ಕು ಕಾಲಘಟ್ಟಗಳಲ್ಲಿ ಗೃಹಸ್ಥಾಶ್ರಮ ಬಹಳ ಪ್ರಮುಖವಾದುದು. ಸಂಪೂರ್ಣ ಸಾಮಾಜಿಕ ಕಟ್ಟಡದ ಆಧಾರಸ್ತಂಭ ಇದು. ಧರ್ಮಶಾಸ್ತ್ರಕಾರ ಗೌತಮನು ಹೇಳುವಂತೆ 'ತೇಷಾಂ ಗೃಹಸ್ಥೋ ಯೋನಿಃ, ಅಪ್ರಜನನತ್ವಾದಿತರೇಷಾಮ್ (ಗೌ. ಧ. ಸೂ. III -- ೩) -- ಗೃಹಸ್ಥಾಶ್ರಮ ಎಲ್ಲ ಆಶ್ರಮಗಳಿಗೂ ಮೂಲಾಧಾರ; ಏಕೆಂದರೆ ಸಂತತಿ ನಿರ್ಮಾಣ ಸಾಮರ್ಥ್ಯವಿರುವುದು ಗೃಹಸ್ಥನಿಗೆ ಮಾತ್ರ. ಶಾಸ್ತ್ರಕಾರ ಮನು 'ಎಲ್ಲ ಪ್ರಾಣಿಗಳೂ ಗಾಳಿಯನ್ನು ಆಶ್ರಯಿಸಿ ಇರುವಂತೆ, ಇತರ ಎಲ್ಲ ಆಶ್ರಮಗಳೂ ಗೃಹಸ್ಥಾಶ್ರಮವನ್ನು ಆಶ್ರಯಿಸಿವೆ. ಇತರ ಮೂರು ಆಶ್ರಮಗಳವರೂ ಆಹಾರ, ತಿಳಿವು -- ಇತ್ಯಾದಿಗಳಿಗೆ ಗೃಹಸ್ಥನನ್ನೇ ಆಶ್ರಯಿಸಬೇಕು. ಆದ್ದರಿಂದ--

ಗೃಹಸ್ಥ ಜ್ಯೇಷ್ಠಾಶ್ರಮೀ  
ಯಥಾ ವಾಯುಂ ಸಮಾಶ್ರಿತ್ಯ  
ವರ್ತನ್ತೇ ಸರ್ವಜನ್ತವಃ  
ತಥಾ ಗೃಹಸ್ಥಮಾಶ್ರಿತ್ಯ  
ವರ್ತನ್ತೇ ಸರ್ವ ಆಶ್ರಮಾಃ  
ಯಸ್ಮಾತ್ ತ್ರಯೋಽಪ್ಯಾಶ್ರಮಿಣೋ  
ಜ್ಞಾನೇ ನಾನ್ನೇನ ಚಾಽನ್ವಹಮ್  
ಗೃಹಸ್ಥೇನೈವ ಧಾರ್ಯನ್ತೇ  
ತಸ್ಮಾತ್ ಜ್ಯೇಷ್ಠಾಶ್ರಮೋ ಗೃಹೀ

(ಮ. ಸ್ಮೃ: III --೭೭, ೭೮)

ಎನ್ನುತ್ತಾನೆ. ಇದೇ ಅಭಿಪ್ರಾಯವನ್ನು ಆತ ಇನ್ನೊಂದು ಕಡೆ ಮತ್ತೊಂದು ಸುಂದರ ಹೋಲಿಕೆಯ ಮೂಲಕ 'ಎಲ್ಲ ನದ -- ನದಿಗಳೂ' ಸಮುದ್ರವನ್ನು ನೆಲೆಯಾಗಿ ಹೊಂದುವಂತೆ, ಇತರ ಎಲ್ಲ ಆಶ್ರಮಗಳವರೂ ತಮ್ಮ ಪೋಷಣೆಗಾಗಿ ಗೃಹಸ್ಥನನ್ನು ಆಶ್ರಯಿಸಿ ನಿಶ್ಚಿಂತರಾಗುತ್ತಾರೆ. ಆದ್ದರಿಂದಲೇ ಶ್ರುತಿ -- ಸ್ಮೃತಿಗಳೆಲ್ಲ ಮೂರೂ ಆಶ್ರಮಗಳನ್ನು ಬೆಂಬಲಿಸುವ ಗೃಹಸ್ಥಾಶ್ರಮವನ್ನು ಶ್ರೇಷ್ಠವೆಂದು ಪರಿಗಣಿಸಲಾಗಿದೆ --

ಸರ್ವೇಷಾಮಪಿ ಚೈತೇಷಾಂ  
ವೇದಸ್ಮೃತಿ ವಿಧಾನತಃ  
ಗೃಹಸ್ಥ ಉಚ್ಯತೇ ಶ್ರೇಷ್ಠಃ  
ಸತ್ರೀನೇತಾನ್ ಬಿಭರ್ತಿ ಹಿ  
ಯಥಾ ನದೀ ನದಾಃ ಸರ್ವೇ  
ಸಾಗರಂ ಯಾನ್ತಿ ಸಂಸ್ಥಿತಿಮ್  
ತಥೈವಾಶ್ರಮಿಣಃ ಸರ್ವೇ  
ಗೃಹಸ್ಥೇ ಯಾನ್ತಿ ಸಂಸ್ಥಿತಿಮ್

(ಮ. ಸ್ಮೃ: IV --೮೯, ೯೦)

--ಎಂದು ಸಮರ್ಥಿಸುತ್ತಾನೆ. ಮನು ಹೇಳುವಂತೆ 'ಈ ಆಶ್ರಮದಲ್ಲಿನ ಕರ್ತವ್ಯಗಳು ದುರ್ಬಲವಾದ ಇಂದ್ರಿಯಗಳಿರುವ ಮನುಷ್ಯರು ಅನುಸರಿಸಲಾರದಂತಹವು. ಈ ಜನ್ಮದಲ್ಲಿ ನಿರಂತರ ಸಂತೋಷವನ್ನೂ, ಸ್ವರ್ಗದಲ್ಲಿ ಅವಿನಾಶಿಯಾದ ಆನಂದವನ್ನೂ ಪಡೆಯಲಿಚ್ಛಿಸುವವನು ಎಚ್ಚರಿಕೆಯಿಂದ ಅವುಗಳನ್ನು ನಡೆಸಬೇಕು'. --

ಸ ಸಂಧಾರ್ಯಃ ಪ್ರಯತ್ನೇನ  
ಸ್ವರ್ಗ ಮಕ್ಷಯ ಮಿಚ್ಛತಾ  
ಸುಖಂ ಚೇ ಹೇಚ್ಛತಾ ನಿತ್ಯಂ  
ಯೋಽಧಾರ್ಯೋ ದುರ್ಬಲೇಂದ್ರಿಯೈಃ

(ಮ. ಸ್ಮೃ: III --೭೯)

ಸ್ಮೃತಿಕಾರ ವಶಿಷ್ಠನು ತನಗೆ ವಿಧಿಸಲಾದ ಎಲ್ಲ ಧರ್ಮ ಅಥವಾ ಕರ್ತವ್ಯಗಳನ್ನು ಶಾಸ್ತ್ರೋಕ್ತವಾಗಿ ನೆರವೇರಿಸುವ ಗೃಹಸ್ಥನೊಬ್ಬ ಬ್ರಹ್ಮಲೋಕದಿಂದ ಮತ್ತೊಮ್ಮೆ ಕೆಳಗೆ ಬೀಳಲಾರ--

ನಿತ್ಯೋದಕೀ ನಿತ್ಯ ಯಜ್ಞೋಪವೀತೀ  
ನಿತ್ಯಸ್ವಾಧ್ಯಾಯೀ ಪತಿತಾನ್ನವರ್ಜೀ  
ಋತೌ ಚ ಗಚ್ಛನ್ ವಿಧಿವಚ್ಚ ಜುಹ್ವನ್  
ನ ಬ್ರಾಹ್ಮಣಶ್ಚ್ಯವತೇ ಬ್ರಹ್ಮಲೋಕಾತ್

(ವಶಿಷ್ಠ. ಸ್ಮೃತಿ : VIII --೧೭)

--ಎನ್ನುತ್ತಾನೆ. ಹೀಗೆ ಇತರ ಮೂರು ಆಶ್ರಮಗಳವರನ್ನೂ ಪೋಷಿಸುವ, ಮೂರು ಪುರುಷಾರ್ಥಗಳನ್ನೂ ಏಕಕಾಲದಲ್ಲಿ ಈಡೇರಿಸುವ ಅವಕಾಶ ಹೊಂದಿರುವ ಮತ್ತು ಸಮಾಜಕ್ಕೆ ನೇರವಾದ ಕೊಡುಗೆಗಳನ್ನು ಸಲ್ಲಿಸುವ ಸಾಧ್ಯತೆಗಳು ವಿಪುಲವಾಗಿರುವ ಗೃಹಸ್ಥಾಶ್ರಮವನ್ನು ಎಲ್ಲ ಧರ್ಮಶಾಸ್ತ್ರಕಾರರೂ ಬಹುವಾಗಿ ಪ್ರಶಂಸಿಸಿದ್ದಾರೆ.

ಶಾಸ್ತ್ರಕಾರರು ಗೃಹಸ್ಥನನ್ನು ಅನೇಕ ಪ್ರಕಾರವಾಗಿ ವಿಭಾಗಿಸಿದ್ದಾರೆ. ಬೋಧಾಯನ, ದೇವಲ ಮತ್ತು ಇತರರು ಶಾಲೀನ ಮತ್ತು ಯಾಯಾವರ ಎಂದು ಗೃಹಸ್ಥನನ್ನು ಎರಡು ವಿಧವಾಗಿ ವಿಭಾಗಮಾಡಿದ್ದಾರೆ.

ಯಥಾಹ ದೇವಲಃ--  
ದ್ವಿವಿಧೋ ಗೃಹಸ್ಥೋ  
ಯಾಯಾ ವರಃ ಶಾಲೀನಶ್ಚ  
ತಯೋರ್ಯಾಯಾವರಃ  
ಪ್ರವರೋ ಯಾಜನಾಧ್ಯಯನ  
ಪರಿಗ್ರಹ ರಿಕ್ಥ ಸಂಚಯ ವರ್ಧನಾತ್  
ಷಟ್‌ಕರ್ಮಾಧಿಷ್ಠಿತಃ ಪ್ರೇಷ್ಯ ಚತುಷ್ಪಾದ  
ಗೃಹಗ್ರಾಮಧನ ಧಾನ್ಯಯುಕ್ತೋ ಶಾಲೀನಃ

(ಮಿತಾಕ್ಷರಃ, ಯಾಜ್ಞವಲ್ಕ್ಯ ಸ್ಮೃತಿಯ ವ್ಯಾಖ್ಯಾನದಲ್ಲಿ ೧-೧೨೮) ಇವರಲ್ಲಿ ಯಾಜನ, ಅಧ್ಯಯನ, ಪರಿಗ್ರಹ, ದ್ರವ್ಯ ಸಂಗ್ರಹ -- ವರ್ಧನೆಗಳಿಂದಾಗಿ ಯಾಯಾವರನೇ ಶ್ರೇಷ್ಠ. ಷಟ್‌ಕರ್ಮಗ

ಳನ್ನು ನೆರವೇರಿಸುತ್ತಾ, ಪಶು -- ಪಕ್ಷಿಗಳು, ಸೇವಕರು, ಧನ--ಧಾನ್ಯ, ಮನೆ--ಮಾರು ಇರುವವನು ಶಾಲೀನ ಎಂದು ಯಾಜ್ಞವಲ್ಕ್ಯ ಸ್ಮೃತಿಯ ವ್ಯಾಖ್ಯಾನದಲ್ಲಿ ಹೇಳಲಾಗಿದೆ. ಮನುಮಹರ್ಷಿಯು ಕುಸೂಲಧಾನ್ಯಕ, ಕುಂಭೀಧಾನ್ಯಕ, ತ್ರ್ಯಹೈಹಿಕ ಮತ್ತು ಅಶ್ವಸ್ತನಿಕ -- ಎಂದು ನಾಲ್ಕು ಪ್ರಕಾರದ ಗೃಹಸ್ಥರನ್ನು ಉಲ್ಲೇಖಿಸುತ್ತಾನೆ.

ಕುಸೂಲ ಧಾನ್ಯಕೋ ವಾಸ್ಯಾತ್
ಕುಂಭೀ ಧಾನ್ಯಕ ಏವವಾ
ತ್ರ್ಯಹೈಹಿಕೋ ವಾಽಪಿ ಭವೇತ್
ಅಶ್ವಸ್ತನಿಕ ಏವವಾ
(ಮ. ಸ್ಮೃ: IV --೭)

ವೈಖಾನಸ ಧರ್ಮಸೂತ್ರದಲ್ಲಿ ಗೃಹಸ್ಥನನ್ನು ವಾರ್ತಾವೃತ್ತಿ, ಶಾಲೀನ ವೃತ್ತಿ, ಯಾಯಾವರ ಮತ್ತು ಘೋರಾಚಾರಿಕ -- ಎಂದು ನಾಲ್ಕು ವಿಭಾಗ ಮಾಡಲಾಗಿದೆ.

ಪ್ರಾಚೀನ ಭಾರತದ ಹೆಚ್ಚಿನ ಎಲ್ಲ ಸ್ಮೃತಿ ಮತ್ತು ಪ್ರಬಂಧ ಗ್ರಂಥಗಳಲ್ಲಿ ಗೃಹಸ್ಥಧರ್ಮವನ್ನು ತುಂಬ ವ್ಯಾಪಕವಾಗಿ ಮತ್ತು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಗೌತಮ ಧರ್ಮಸೂತ್ರ (ಅ. V ಮತ್ತು IX) ಆಪಸ್ತಂಬ ಧರ್ಮ ಸೂತ್ರ II --೧, II – ೪, ೯) ವಶಿಷ್ಠ ಧರ್ಮಸೂತ್ರ (VIII – ೧--೧೭; XI – ೧--೪೮) ಮನು ಸ್ಮೃತಿ (IV) ಯಾಜ್ಞವಲ್ಕ್ಯ ಸ್ಮೃತಿ (I – ೯೭--೧೨೭) ವಿಷ್ಣು ಧರ್ಮಸೂತ್ರ (೬೦--೭೧) ದಕ್ಷಸ್ಮೃತಿ (II) ಲಘುಹಾರೀತ ಸ್ಮೃತಿ (IV) ಸ್ಮೃತಿ ಚಂದ್ರಿಕಾ (೮೮ ರಿಂದ ೨೩೨ ಪುಟ) ಗೃಹಸ್ಥರತ್ನಾಕರ, ಆಹ್ನಿಕ ತತ್ತ್ವ, ವೀರಮಿತ್ರೋದಯ, ಸ್ಮೃತಿ ಮುಕ್ತಾಫಲ -- ಇತ್ಯಾದಿಗಳು ಇವುಗಳಲ್ಲಿ ಪ್ರಮುಖ ಗ್ರಂಥಗಳು. ಇಲ್ಲಿ ತುಂಬ ವ್ಯಾಪಕ ಮತ್ತು ಸೂಕ್ಷ್ಮವಾಗಿ ಹೇಳಲಾದ ಗೃಹಸ್ಥ ಧರ್ಮಗಳಲ್ಲಿ ಬಹಳ ಮುಖ್ಯ ಮತ್ತು ವಿಶೇಷವೆನಿಸುವ ಕೆಲವನ್ನು ಮಾತ್ರ ಇಲ್ಲಿ ಹೇಳಲಾಗುತ್ತದೆ. ಕೆಲವು ಗ್ರಂಥಗಳು ಗೃಹಸ್ಥನ ನೈತಿಕ ಕರ್ತವ್ಯಗಳನ್ನು ಉಲ್ಲೇಖಿಸುತ್ತವೆ. ಉದಾಹರಣೆಗೆ ವ್ಯಾಸನು ಅಹಿಂಸೆ, ಸತ್ಯ, ಪ್ರಾಣಿದಯೆ, ಶಮ, ದಾನ, ಪರದಾರಾ ಸಂಸರ್ಗದಿಂದ ದೂರವಿರುವಿಕೆ, ತನ್ನ ಪತ್ನಿಯ ಮತ್ತು ನ್ಯಾಸ ಇರಿಸಿರುವ ವಸ್ತುವಿನ ರಕ್ಷಣೆ, ತನಗೆ ದಾನ ಕೊಡದಿರುವ ವಸ್ತುಗಳನ್ನು ಬಯಸದಿರುವುದು, ಮದ್ಯ-- ಮಾಂಸಾದಿಗಳನ್ನು ಸೇವಿಸದಿರುವುದು -- ಇವೆಲ್ಲ ಗೃಹಸ್ಥ ಧರ್ಮ. **ಇದು ಅನೇಕ ಶಾಖೋಪಶಾಖೆಗಳಿಂದ ಕೂಡಿದೆ ಮತ್ತು ಸುಖಕ್ಕೆ ಕಾರಣವಾಗಿದೆ --**

ಅಹಿಂಸಾ ಸತ್ಯವಚನಂ
ಸರ್ವಭೂತಾನು ಕಂಪನಂ
ಶಮೋದಾನಂ ಯಥಾಶಕ್ತಿ
ಗಾರ್ಹಸ್ಥ್ಯೋ ಧರ್ಮ ಉತ್ತಮಃ
ಪರದಾರೇಷ್ವ ಸಂಸರ್ಗೋ
ನ್ಯಾಸಸ್ತ್ರೀ ಪರಿರಕ್ಷಣಮ್
ಅದತ್ತದಾನವಿರಮೋ
ಮಧುಮಾಂಸಸ್ಯ ವರ್ಜನಮ್
ಏಷ ಪಂಚವಿಧೋ ಧರ್ಮೋ
ಬಹುಶಾಖಃ ಸುಖೋದಯಃ
(ಅನು. ಪ: ೧೪೧; ೨೫--೨೬)

--ಎನ್ನುತ್ತಾನೆ. ದಕ್ಷನೂ ಸಹ ಇಂತಹ ನೈತಿಕ ವಿಚಾರಗಳನ್ನು ಗೃಹಸ್ಥನಿಗೆ ವಿಧಿಸುತ್ತಾನೆ.

ಪರಾಶರ ಸ್ಮೃತಿಯಲ್ಲಿ ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ದೇವತಾರ್ಚನೆ, ಅತಿಥಿಸತ್ಕಾರ ಮತ್ತು ವೈಶ್ವದೇವ -- ಇವು ಗೃಹಸ್ಥನು ಆಚರಿಸಬೇಕಾದ ನಿತ್ಯ ಕರ್ಮಗಳೆಂದು ಹೇಳಲಾಗಿದೆ.

ಸಂಧ್ಯಾಸ್ನಾನಂ ಜಪೋ ಹೋಮ
ಸ್ವಾಧ್ಯಾಯೋ ದೇವತಾರ್ಚನಮ್
ವೈಶ್ವದೇವಾತಿಥೇಯಂ ಚ
ಷಟ್ ಕರ್ಮಾಣಿ ದಿನೇ ದಿನೇ
(ಪರಾ. ಸ್ಮೃ: ೧--೩೯)

ಸ್ಮೃತಿಕಾರ ದಕ್ಷನು ಸ್ನಾನ, ಸಂಧ್ಯಾವಂದನೆ, ಜಪ, ಹೋಮ, ಸ್ವಾಧ್ಯಾಯ, ದೇವತಾರ್ಚನೆ, ವೈಶ್ವದೇವ, ಅತಿಥಿಸತ್ಕಾರ, ಪಿತೃದೇವ -- ಮನುಷ್ಯ -- ದೀನ -- ಅನಾಥ -- ತಪಸ್ವಿ -- ಮಾತೃ -- ಪಿತೃ -- ಗುರು -- ಇವರ ಸೇವೆ -- ಈ ಒಂಭತ್ತು ಗೃಹಸ್ಥನ ಕರ್ತವ್ಯಗಳೆನ್ನುತ್ತಾನೆ.

ಸಂಧ್ಯಾ ಸ್ನಾನಂ ಜಪೋಹೋಮಃ
ಸ್ವಾಧ್ಯಾಯೋ ದೇವತಾರ್ಚನಮ್
ವೈಶ್ವದೇವಂ ತಥಾ ಥಿತ್ಯಂ
ಉದ್ಧೃತಂ ಚಾಽಪಿ ಶಕ್ತಿತಃ
ಪಿತೃದೇವಮನುಷ್ಯಾಣಾಂ
ದೀನಾಽನಾಥ ತಪಸ್ವಿನಾಂ
ಮಾತಾ ಪಿತೃಗುರೂಣಾಂ ಚ
ಸಂವಿಭಾಗೋ ಯಥಾರ್ಥತಃ
ಏತಾನಿ ನವ ಕರ್ಮಾಣಿ........
(ದ. ಸ್ಮೃ : II : ೮--೯)

ಮನು ಮಹರ್ಷಿಯೂ ಸಹ--
ಮೈತ್ರಂ ಪ್ರಸಾಧನಂ ಸ್ನಾನಂ
ದಂತಧಾವನ ಮಂಜನಮ್
ಪೂರ್ವಾಹ್ನ ಏವ ಕುರ್ವೀತ
ದೇವತಾನಾಂ ಚ ಪೂಜನಮ್
(ಮ. ಸ್ಮೃ IV : ೧೫೨)

ಎಂದು ಗೃಹಸ್ಥನೊಬ್ಬನು ಪೂರ್ವಾಹ್ಣದಲ್ಲಿ ಮೂತ್ರ ಪುರೀಷೋತ್ಸರ್ಜನ, ದಂತಧಾವನ, ಸ್ನಾನ, ದೇವತಾಪೂಜನ, ಅಂಜನ, ಪ್ರಸಾಧನ -- ಇವುಗಳನ್ನು ನಡೆಸಬೇಕೆನ್ನುತ್ತಾನೆ.

'ಪಾಣಿ ಗ್ರಹಣಾದಿ ಗೃಹ್ಯಮ್' -- ಎಂದು ಆಶ್ವಲಾಯನರು ಹೇಳುವಂತೆ ಸ್ನಾತಕನೊಬ್ಬನ ಗೃಹಸ್ಥ ಜೀವನವು ಆರಂಭಗೊಳ್ಳುವುದು ವಿವಾಹದ ನಂತರ. ಪಾರಸ್ಕರ, (I--೨) ಖಾದಿರ, (೧-೫-೧) ಶಂಖ, (೧-೧೧) ಹಿರಣ್ಯಕೇಶೀ (೧-೭-೨೨) ಮತ್ತು ಆಪಸ್ತಂಬ (II -- 15 -- 14) ಮೊದಲಾದ ಗೃಹ್ಯಸೂಕ್ತಗಳೂ ಸಹ ಈ ಕುರಿತು ಸ್ಪಷ್ಟವಾದ ಮಾತುಗಳಲ್ಲಿ ಹೇಳಿವೆ. ವ್ಯಕ್ತಿಯೊಬ್ಬನ ವಂಶ ಅಥವಾ ಕುಲದ ರಕ್ಷಣೆ ಮತ್ತು ಸಂವರ್ಧನೆಗೆ ಸಂಬಂಧಿಸಿದ ಎಲ್ಲ ವಿಧಿಗಳೂ ಆರಂಭವಾಗುವುದು ಪಾಣಿಗ್ರಹಣದ ನಂತರವೇ ಅನ್ನುತ್ತದೆ, ಧರ್ಮಶಾಸ್ತ್ರ. ಪಾಣಿಗ್ರಹಣದ ಸಂದರ್ಭದಲ್ಲಿ ತಾನು ಪಡೆದ ಗೃಹ್ಯಾಗ್ನಿಯಲ್ಲಿ ಗೃಹಸ್ಥನು ಶಾಸ್ತ್ರಗಳ ವಿಧಿ. ನಿಬಂಧನೆ ಅಥವಾ ನಿರ್ದೇಶನದಂತೆ ಪಂಚ ಮಹಾಯಜ್ಞ ಮೊದಲಾದ ಗೃಹಸ್ಥ ಧರ್ಮಗಳನ್ನು ನಡೆಸಿಕೊಂಡು ಬರಬೇಕು; ಗೃಹಸ್ಥನು ತಾನು ಪ್ರತಿನಿತ್ಯ ಮಾಡುವ ಪಂಚಸೂನಾದೋಷ ಪರಿಹಾರಕ್ಕಾಗಿ ಈ ಪಂಚಮಹಾಯಜ್ಞವನ್ನು ನಡೆಸಬೇಕು -- ಎಂಬುದು ಶಾಸ್ತ್ರಗಳ ಆದೇಶ. ಸೂನಾ ಎಂದರೆ ಪಶುವಧಸ್ಥಾನ. ಸೂನಾ -- ಪಶುವಧಸ್ಥಾನಮ್ -- ಎಂದು ಕುಲ್ಲೂಕ ಭಟ್ಟನ ವಿವರಣೆ. ಪ್ರತಿ ಗೃಹಗಳಲ್ಲೂ ಇರುವ ಒಲೆ, ಅರೆಯುವ ಅಥವಾ ಬೀಸುವ ಕಲ್ಲು, ಪೊರಕೆ, ಒರಳು -- ಒನಕೆ ಮತ್ತು ನೀರಿನ ಪಾತ್ರೆ -- ಇವೇ ಪಂಚಸೂನಾಗಳು ಅಂದರೆ ಪ್ರಾಣಿವಧೆಯ ಸ್ಥಾನಗಳು -- ಎಂದು ಶಾಸ್ತ್ರಕಾರ ಮನು ಹೇಳುತ್ತಾನೆ.

ಪಂಚಸೂನಾ ಗೃಹಸ್ಥಸ್ಯ
ಚುಲ್ಲೀ ಪೇಷಣ್ಯುಪಸ್ಕರಃ
ಕಂಡನೀ ಚೋದಕುಂಭಶ್ಚ
ಬಧ್ಯತೇ ಯಾಸ್ತು ವಾಹಯನ್
ತಾಸಾಂ ಕ್ರಮೇಣ ಸರ್ವಾಸಾಂ
ನಿಷ್ಕೃತ್ಯರ್ಥಂ ಮಹರ್ಷಿಭಿಃ
ಪಂಚಕ್ಲೃಪ್ತಾ ಮಹಾಯಜ್ಞಾಃ
ಪ್ರತ್ಯಹಂ ಗೃಹಮೇಧಿನಾಮ್
(ಮ. ಸ್ಮೃ : III : ೬೮ -- ೬೯)

ಮೇಲೆ ಹೇಳಿದ ಒಲೆ ಮೊದಲಾದ ಐದು ಉಪಕರಣಗಳನ್ನು ಬಳಸುವಾಗ ಗೃಹಸ್ಥನು ಗೊತ್ತಿದ್ದೋ, ಗೊತ್ತಿಲ್ಲದೆಯೋ ಇರುವೆ, ಕ್ರಿಮಿ -- ಕೀಟ -- ಮೊದಲಾದ ಸಹಸ್ರಾರು ಜೀವಿಗಳ ಹತ್ಯೆ ನಡೆಸುತ್ತಾನೆ.

ಇದರಿಂದುಂಟಾಗುವ ಪಾತಕದ ಪರಿಹಾರಕ್ಕಾಗಿ ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ ಮತ್ತು ಮನುಷ್ಯ ಯಜ್ಞವೆಂಬ ಪಂಚಮಹಾ ಯಜ್ಞ ವನ್ನು ಗೃಹಸ್ಥನು ನಡೆಸಲೇ ಬೇಕೆಂಬುದು ಶಾಸ್ತ್ರಗಳ ವಿಧಿ; ಮಾತ್ರವಲ್ಲ ಅನುಶಾಸನ.

ಸ್ವಾಧ್ಯಾಯೇನಾರ್ಚಯೇ ತರ್ಷೀನ್
ಯಜ್ಞೈರ್ವದೇವಾನ್ಯಥಾವಿಧಿ
ಪಿತ್ರಾನ್ ಶ್ರಾದ್ಧೈಶ್ಚನ್ರೂನನ್ನೈ:
ಭೂತಾನಿ ಬಲಿಕರ್ಮಣಾ

(ಮ. ಸ್ಮ : ೩--೮೧)

ಯಜ್ಞ ಎಂಬುದು ದೇವಪೂಜೆ, ಸಂಗತೀಕರಣ, ದಾನ -- ಎಂಬ ಮೂರು ಅರ್ಥವುಳ್ಳ, ಯಜ್ ಧಾತು ವಿನಿಂದ ವ್ಯುತ್ಪನ್ನಗೊಂಡ ಶಬ್ದವಾಗಿದೆ. ಯಜ್ಞವೆನ್ನು ವುದರಲ್ಲಿ ಪೂಜೆ, ತ್ಯಾಗ, ದಾನ -- ಇವು ಮೂರು ಸೇರಿರುತ್ತವಾಗಿದ್ದು ಸಂಗ್ರಹವಾಗಿ ಯಜ್ಞ ಎಂದರೆ ಪರಿತ್ಯಾಗ ಎಂದು ಹೇಳಬಹುದು. ಜೀವನದ ಮೂಲತತ್ತ್ವವೇ ತ್ಯಾಗ ಮತ್ತು ದಾನ ಎಂದು ಸನಾ ತನ ಹಿಂದೂ ಧರ್ಮದಲ್ಲಿ ವಿವರವಾಗಿ ಹೇಳಲಾ ಗಿದೆ. ಇತರರ ಉಪಕಾರಕ್ಕಾಗಿ ತನ್ನಲ್ಲಿರುವುದನ್ನು ಶ್ರದ್ಧೆಯಿಂದ, ಪ್ರೀತಿಯಿಂದ, ಅರ್ಪಣಬುದ್ಧಿಯಿಂದ ತ್ಯಾಗಮಾಡಿ ದಾನ ಮಾಡುವುದೇ ಯಜ್ಞದಲ್ಲಿ ಅಡ ಗಿರುವ ವಿಶೇಷವಾದ ತತ್ತ್ವವಾಗಿದೆ. ಯಜ್ಞಮಾ ಡುವುದರಿಂದ ವ್ಯಕ್ತಿಯ ಹೃದಯದ ಗುಣ ಸಂಪ ತ್ತುಗಳು ಬೆಳೆಯುತ್ತವೆ. ಜಗತ್ತು ಮತ್ತು ಜೀವರ ಹುಟ್ಟು -- ಬೆಳವಣಿಗೆಗಳ ಹಿನ್ನೆಲೆಯಲ್ಲಿ ಯಜ್ಞದ ಈ ತತ್ತ್ವ ಅಡಗಿದ್ದು ಬಾಳಿನಲ್ಲಿ ಪರಸ್ಪರ ತ್ಯಾಗ, ದಾನ -- ತನ್ಮೂಲಕದ ಪೂಜೆ ಇಲ್ಲದೆ ಜಗತ್ತಾ ಗಲಿ, ಜೀವನವಾಗಲಿ -- ಯಾವುದೂ ನಡೆಯದು -- ಎಂದು ಧರ್ಮಶಾಸ್ತ್ರಗ್ರಂಥಗಳಲ್ಲಿ ವಿಸ್ತಾರವಾಗಿ ಹೇಳಲಾಗಿದೆ.

ಶಾಸ್ತ್ರಕಾರರು ಗೃಹಸ್ಥನಿಗೆ ವಿಧಿಸಿರುವ ಈ ಪಂಚ ಮಹಾ ಯಜ್ಞದ ಹಿಂದೆ ಕೆಲವು ಸಾಮಾಜಿಕ ಮತ್ತು ಮಾನವೀಯ ಅಂಶಗಳೂ ಸೇರಿಕೊಂಡಿವೆ. ಬ್ರಹ್ಮ ಯಜ್ಞವೆಂದು ಕರೆಯಲಾಗುವ ಸ್ವಾಧ್ಯಾಯ -- ಪ್ರವ ಚನಗಳ ಸಂದರ್ಭದಲ್ಲಿ ವೇದ -- ಶಾಸ್ತ್ರಾದಿ ಜ್ಞಾನ -- ವಿಜ್ಞಾನಗಳು ಶಾಖೋಪಶಾಖೆಯಾಗಿ ಬೆಳೆ ಯಲು ಕಾರಣರಾದ ನಮ್ಮ ಪ್ರಾಚೀನ ಋಷಿ -- ಮುನಿಗಳನ್ನು ಕೃತಜ್ಞತೆಯಿಂದ ಸ್ಮರಿಸಲಾಗು ತ್ತದೆ; ಮಾತ್ರವಲ್ಲ, ಅವರು ನಮಗೆ ಕೊಟ್ಟಿರುವ ಈ ಅಪೂರ್ವ ಸಂಪತ್ತನ್ನು ಉಳಿಸಿ, ಬೆಳೆಸಿ ನಮ್ಮ ಮುಂದಿನ ಪೀಳಿಗೆಗೆ ಅದನ್ನು ನೀಡಲಾಗುತ್ತದೆ. ಇದರಿಂದ ತನ್ನ ಜ್ಞಾನ ವೃದ್ಧಿಯಾಗುವುದಲ್ಲದೆ ತನ್ನ ಇಂದ್ರಿಯಗಳನ್ನು ಹತೋಟಿಯಲ್ಲಿ ಇಡಲು ಉತ್ತಮ ಮನಃಸ್ಥಿತಿ ಹೊಂದಿ, ವಿವೇಕ -- ಯೋಗ್ಯ ತೆಗಳಿಂದ ಕೂಡಲು ಗೃಹಸ್ಥನಿಗೆ ಸಾಧ್ಯವಾಗುತ್ತದೆ.

ತರ್ಪಣ, ಶ್ರಾದ್ಧ -- ಮೊದಲಾದವುಗಳ ಮೂಲಕ ನಡೆಸಲಾಗುವ ಪಿತೃಯಜ್ಞದಲ್ಲಿ ನಮ್ಮ ಭೌತಿಕದೇ ಹದ ಉತ್ಪತ್ತಿಗೆ ಕಾರಣರಾದ ತಂದೆ -- ತಾಯಿಗ ಳನ್ನು ಮತ್ತು ನಮ್ಮ ಪೂರ್ವಜರನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅವರ ಋಣವನ್ನು ತೀರಿಸಲು ಇರುವ ಏಕಮಾತ್ರ ಸಾಧನ, ಈ ಪಿತೃಯಜ್ಞ. ಮರೀಚಿ ಮತ್ತು ಮನುಮಹರ್ಷಿಯ ಮೂಲಕ ಉತ್ಪನ್ನವಾದ ಮನುಕುಲಕ್ಕೆ ಸೇರಿದ ನಮ್ಮ ಹಿರಿಯ ಪೀಳಿಗೆಯವರು ಮರಣಾ ನಂತರದಲ್ಲಿ ಪಿತೃಲೋ ಕದಲ್ಲಿ ವಾಸಮಾಡಿಕೊಂಡಿರುತ್ತಾರೆ -- ಎಂಬ ತತ್ತ್ವ ಶ್ರದ್ಧೆಯೇ ಈ ಯಜ್ಞದ ಮೂಲ ತತ್ತ್ವವಾಗಿದೆ. ಏಕೆಂದರೆ ಹಿಂದಿನ ಪೀಳಿಗೆಯವರು ವಿದ್ಯೆ, ಸಂಸ್ಕೃತಿ, ಸಂಪತ್ತು, ಸುಖಗಳನ್ನು ಸಂಗ್ರಹಿಸಿದ್ದು, ಅವು ಈ ಪೀಳಿಗೆಗೆ ಲಭ್ಯವಾಗಿವೆ. ಹಾಗಾಗಿ ಈ ಸಮಾ ಜದಲ್ಲಿ ಜನ್ಮತಳೆದ ಜೀವಿಯು ತನ್ನ ಕುಟುಂಬದ ಹಿಂದಿನ ಹಿರಿಯರಿಗೆ ಕೃತಜ್ಞರಾಗಿರಬೇಕು; ಅವ ರನ್ನು ಸದಾಸ್ಮರಿಸುತ್ತಿರಬೇಕು -- ಎಂಬ ಉದ್ದೇಶದಿಂ ದಲೂ, ಪಿತೃಗಳ ಆಶೀರ್ವಾದ -- ಅನುಗ್ರಹ ಪಡೆ ಯಲೋಸುಗವಾಗಿಯೂ ಈ ಯಜ್ಞವನ್ನು ಮಾಡ ಬೇಕು. ಸಮಾಜದಲ್ಲಿರುವ ಪತಿತರು, ರೋಗಿಗಳು, ಚಂಡಾಲರು, ಪಶು--ಪಕ್ಷಿಗಳು -- ಇತ್ಯಾದಿಗಳಿಗೆ ಆಹಾರ ದೊರೆಯುವಂತೆ ವ್ಯವಸ್ಥೆ ಮಾಡುವುದೇ ಭೂತಯಜ್ಞ. ಈ ಸಮಾಜದಲ್ಲಿ ತನಗಿಂತ ಕಡಿಮೆ ಅದೃಷ್ಟವಂತರೂ, ನಿಕೃಷ್ಟರೂ, ನಿರ್ಗತಿಕರೂ ಸಹ ಬದುಕಬೇಕು; ಅವರಿಗೂ ಅನ್ನಾಹಾರ ದೊರೆಯ ಬೇಕು-- ಎಂಬ ಕಾಳಜಿ ಇಲ್ಲಿದೆ. ಇದರಿಂದ ಭೂರ ದಯೆ, ದೀನಾನುಕಂಪೆಗಳು ವರ್ಧಿಸುತ್ತವೆ. ಜಗ ತ್ತಿನಲ್ಲಿ ತನಗಿಂತ ಕೀಳಾದವರನ್ನೂ ಕೂಡ ಅಲಕ್ಷಿ ಸದೆ ಅವರಲ್ಲೂ ಸಹ ಭಗವಂತನು ಅಂತರ್ಯಾ ಮಿಯಾಗಿದ್ದಾನೆ -- ಎಂಬುದನ್ನು ಸದಾ ಅನುಭವಿ ಸಲು ಈ ಯಜ್ಞವು ಸಹಕಾರಿಯಾಗುತ್ತದೆ. ಮನು ಷ್ಯನು ಇತರರನ್ನು ತನ್ನವರು ಎಂದು ಪ್ರೀತಿಯಿಂದ ಕಾಣುತ್ತಾ, ಅವರೊಡನೆ ಸ್ನೇಹ -- ಸಹಕಾರಗಳಿಂದ ಕೂಡಿ ಬಾಳನ್ನು ಸಾಗಿಸಲು ಸಹಕಾರಿಯಾಗುವಂತೆ ಆತನ ಮನಸ್ಸನ್ನು ಸಿದ್ಧಗೊಳಿಸುವುದೇ ಮನುಷ್ಯಯ ಜ್ಞದ ಉದ್ದೇಶ. ಭಗವಂತನು ಸರ್ವರೂಪಗಳಲ್ಲೂ ಇದ್ದಾನೆ -- ಎಂಬ ತತ್ತ್ವವನ್ನು ಕಾರ್ಯತಃ ಅನು ಷ್ಠಾನಕ್ಕೆ ತರಲು ಈ ಯಜ್ಞ ಸಹಕಾರಿಯಾಗುತ್ತದೆ. ಮನೆ ಇಲ್ಲದವರಿಗೆ, ಅತಿಥಿಗಳಿಗೆ, ದೀನರಿಗೆ, ರಿಕ್ತ ರಿಗೆ ಊಟ--ಉಪಚಾರ, ಸಹಾಯ ಸತ್ಕಾರಗಳನ್ನು ನೀಡುವುದು ಮನುಷ್ಯಯಜ್ಞವೆನಿಸುತ್ತದೆ.

ಮನುಕುಲದ ಉನ್ನತಿಗಾಗಿ ತಾನು ಈ ಜಗತ್ತಿ ನಲ್ಲಿ ಮಾಡಲು ಸಾಧ್ಯವಾಗುವ ಎಲ್ಲ ವಿಧದ ಸೇವಾ ಕಾರ್ಯಗಳೂ ಈ ಯಜ್ಞದಲ್ಲಿ ಅಡಕವಾಗಿವೆ.

ಮನುಸ್ಮೃತಿ ಹೇಳುವಂತೆ ಋಷಿಗಳು -- ಪಿತೃ ಗಳು -- ದೇವತೆಗಳು -- ಪಶುಪಕ್ಷಿಗಳು ಮತ್ತು ಅತಿ ಥಿಗಳು ಗೃಹಸ್ಥನು ತಮ್ಮನ್ನು ಸಂತೃಪ್ತಿಗೊಳಿಸಬೇ ಕೆಂದು ಆಶಿಸುತ್ತಾರೆ. ಆದ್ದರಿಂದ ಗೃಹಸ್ಥನು ಅವ ರನ್ನು ನಿರಾಶೆಗೊಳಿಸಬಾರದು.

ಋಷಯಃ ಪಿತರೋ ದೇವಾಃ
ಭೂತಾನ್ಯತಿಥಯಸ್ತಥಾ
ಆಶಾಸತೆ ಕುಟುಂಬಭ್ಯಃ
ತೇಭ್ಯಃ ಕಾರ್ಯಂ ವಿಜಾನತಾ

(ಮ. ಸ್ಮ III -- ೮೦)

ಗೃಹಸ್ಥನು ತನ್ನ ಪತ್ನಿಯೊಂದಿಗೆ ಋಷಿಗಳು, ದೇವತೆಗಳು, ಪಿತೃಗಳು, ಗೃಹದೇವತೆಗಳು, ಅತಿಥಿ ಗಳು ಮತ್ತು ಸೇವಕರನ್ನು ತೃಪ್ತಿಪಡಿಸಿದ ನಂತರವೇ ತಾವು ಭೋಜನ ಸ್ವೀಕರಿಸಬೇಕು.

ಭುಕ್ತವಸ್ತ್ವಥ ವಿಪ್ರೇಷು
ಸ್ವೇಷು ಭೃತ್ಯೇಷು ಚೈವ ಹಿ
ಭುಂಜೀಯಾತಾಂ ತತಃ ಪಶ್ಚಾತ್
ಅವಶಿಷ್ಟಂ ತು ದಂಪತೀ
ದೇವಾನ್ಋಷೀನ್ಮನುಷ್ಯಾಂಶ್ಚ
ಪಿತೄನ್ ಗೃಹ್ಯಾಂಶ್ಚ ದೇವತಾಃ
ಪೂಜಯಿತ್ವಾ ತತಃ ಪಶ್ಚಾತ
ಗೃಹಸ್ಥಃ ಶೇಷಭುಗ್ಭವೇತ್

(ಮ. ಸ್ಮ III : ೧೧೬--೧೧೭)

ಯಾಜ್ಞವಲ್ಕ್ಯನು ಇದನ್ನೇ--

ಬಾಲಸ್ವವಾಸಿನೀ ವೃದ್ಧ
ಗರ್ಭಿಣ್ಯಾತುರ ಕನ್ಯಕಾಃ
ಸಂಭೋಜ್ಯಾತಿಥಿಭೃತ್ಯಾಂಶ್ಚ
ದಂಪತ್ಯೋಃ ಶೇಷ ಭೋಜನಮ್

(ಯಾ. ಸ್ಮ : ೧--೧೦೫)

ಎನ್ನುತ್ತಾನೆ. ಪಾರಸ್ಕರ ಗೃಹ್ಯಸೂತ್ರದಲ್ಲಿ--

ಯಥಾರ್ಹಂ ಭಿಕ್ಷುಕಾನ್
ಅತಿಥೀಂಶ್ಚ ಸಂಭ ಜೇರನ್,
ಬಾಲಜ್ಯೇಷ್ಠಾ ಗೃಹ್ಯಾ
ಯಥಾರ್ಥ ಮಶ್ನೀಯುಃ
ಪಶ್ಚಾದ್ ಗೃಹಪತಿಃ ಪತ್ನೀಚ

(ಪ. ಗೃ. ಸೂ. II : ೯; ೧೨, ೧೪)

ಎನ್ನಲಾಗಿದೆ. ಹೀಗೆ ಅತಿಥಿಸೇವೆ ತ್ಯಾಗ - ದಾನ ಗಳು ಹಿಂದೂ ಕುಟುಂಬದ ಆದರ್ಶ; ಗೃಹಸ್ಥ -- ಗೃಹಿಣಿಯರಿಗೆ ತೃಪ್ತಿ ಕೊಡುವ ಸಾಧನ; ತ್ಯಾಗೇ ನೈಕೇ ಅಮೃತತ್ವಮಾನಶುಃ -- ಎಂಬ ಶ್ರುತಿವಾಕ್ಯ ದಂತೆ ಸಂಪತ್ತನ್ನು ಕೂಡಿಡುವುದಕ್ಕಿಂತ, ಅದನ್ನು

ಸತ್ಪಾತ್ರರಾದ 'ದೀನ -- ದುರ್ಬಲರಿಗೆ ದಾನವಾಗಿ ಕೊಡುವುದು ಅಮೃತತ್ವಕ್ಕೆ ಹೆದ್ದಾರಿ. ಯಾಜ್ಞವಲ್ಕ್ಯನು ಹೇಳುವಂತೆ--

ಜೀವೇದ್ವಾತಿ ಶಿಲೋಂಛೇನ
ಶ್ರೇಯಾನೇಷಾಂ ಪರಃ ಪರಃ
(ಯಾ. ಸ್ಮೃ. ೧ -- ೧೨೮)

--ಗೃಹಸ್ಥನು ಶಿಲೋಂಛ ವೃತ್ತಿಯಿಂದ ಅಂದರೆ ತಾನು ಬೆಳೆದ ಧಾನ್ಯವನ್ನೆಲ್ಲ ಅದರ ಅವಶ್ಯಕತೆ ವುಳ್ಳವರಿಗೆ ದಾನ ಮಾಡಿ, ತಾನು ಕೊನೆಗೆ ಗದ್ದೆ ಯಲ್ಲಿ ಬಿದ್ದಿರುವ ಕಾಳುಗಳನ್ನು ಸಂಗ್ರಹಿಸಿ ಅದ ರಿಂದ ಜೀವನ ಮಾಡುವುದು ಶ್ರೇಯಸ್ಕರ--

ಗೃಹಸ್ಥನು ತಾನು ವಿವಾಹದ ದಿನದಿಂದ ಆರಂ ಭಿಸಿದ ಗೃಹ್ಯಾಗ್ನಿ ಪರಿಚರ್ಯೆಯನ್ನು ತಪ್ಪದೆ ನಡೆಸ ಬೇಕು. ಈ ಅಗ್ನಿಯು ಯಾವುದೇ ರೀತಿಯಲ್ಲಿ ನಷ್ಟ ವಾಗದಂತೆ ನೋಡಿಕೊಳ್ಳುವುದು ಅವನ ಕರ್ತವ್ಯ ತಾನು ಪ್ರವಾಸಾದಿಗಳಿಗೆ ಹೋಗಿ ಅನುಪಸ್ಥಿತನಾಗಿ ದ್ದಲ್ಲಿ ಹೆಂಡತಿ, ಅವಳು ಉಪಸ್ಥಿತಳಿಲ್ಲದಿದ್ದಲ್ಲಿ ಮಗ, ಮಗಳು ಅಥವಾ ಶಿಷ್ಯನು ಈ ಅಗ್ನಿಯನ್ನು ಸಂರ ಕ್ಷಿಸಬೇಕು. ಅಗ್ನಿಯು ಯಾವುದೇ ಕಾರಣದಿಂದ ಉಪಶಮನಗೊಂಡರೆ ಆ ಗೃಹಸ್ಥನ ಪತ್ನಿಯು ಉಪ ವಾಸಮಾಡಬೇಕು -- ಎಂದು ಕೆಲವು ಮಂದಿ ಆಚಾ ರ್ಯರ -- ಮತ.

ಪಾಣಿಗ್ರಹಣಾದಿ ಗೃಹ್ಯಂ
ಪರಿಚರೇತ್ ಸ್ವಯಂ ಪತ್ನ್ಯಪಿ ವಾ
ಪುತ್ರಃ ಕುಮಾರ್ಯಂತೇ ವಾಸೀವಾ
ಯದಿತೂಪಶಾಮ್ಯೇತ್
ಪತ್ನ್ಯುಪವಸೇದಿತ್ಯೇಕೇ
(ಆಶ್ವ. ಗೃ. ಸೂ. I೯ -- ೧, ೨, ೩ ಮತ್ತು ೫)

--ಎಂದು ಆಶ್ವಲಾಯನ ಗೃಹ್ಯಸೂತ್ರದಲ್ಲಿ ಹೇಳ ಲಾಗಿದೆ.

ಗೃಹಸ್ಥನು ಇಂತಹ ಎಲ್ಲ ನಿಯಮಗಳನ್ನೂ ತಪ್ಪದೆ ತನ್ನ ಕರ್ತವ್ಯವೆಂದು ಪಾಲಿಸಿಕೊಂಡು ಬರ ಬೇಕು. ಈ ಕರ್ತವ್ಯಗಳನ್ನು ಶ್ರದ್ಧೆಯಿಂದ ನಿರ್ವಹಿ ಸುವುದರ ಮೂಲಕ ಆತ ಧರ್ಮವನ್ನು ಹೆಚ್ಚೆಚ್ಚು ಸಂಗ್ರಹಿಸಿದಂತಾಗುತ್ತದೆ. ಏಕೆಂದರೆ ಮರಣಾನಂ ತರ ಅವನ ತಂದೆ -- ತಾಯಿಗಳು ಅವನ ಸಹಾಯಕ್ಕೆ ಬರುವುದಿಲ್ಲ; ಹೆಂಡತಿ -- ಮಕ್ಕಳೂ ಅವನೊಂದಿರು ವುದಿಲ್ಲ; ಬಂಧು -- ಬಾಂಧವರೂ ಜತೆಗೆ ಬರುವು ದಿಲ್ಲ; ಅವನು ತನ್ನ ಜೀವಿತಾವಧಿಯಲ್ಲಿ ಆರ್ಜಿಸಿದ ಧರ್ಮವೊಂದು ಮಾತ್ರ ಅವನ ಜೊತೆಗುಳಿಯು ತ್ತದೆ. ಅದನ್ನೇ ಮಹರ್ಷಿ ಮನುವು--

ನಾಽಮುತ್ರ ಹಿ ಸಹಾಯಾರ್ಥಂ
ಪಿತಾ ಮಾತಾ ಚ ತಿಷ್ಠತಃ
ನ ಪುತ್ರದಾರಾ ನ ಜ್ಞಾತಿಃ
ಧರ್ಮಸ್ತಿಷ್ಠತಿ ಕೇವಲಃ
(ಮ. ಸ್ಮೃ. : IV --೨೩೮)

ಅನ್ನುತ್ತಾನೆ. ಪ್ರತಿಯೊಬ್ಬ ವ್ಯಕ್ತಿಯೂ ಹುಟ್ಟು ವುದು ಒಬ್ಬೊಂಟಿಗನಾಗಿ; ಸಾಯುವುದೂ ಒಂಟಿ ಯಾಗಿಯೇ; ಪುಣ್ಯ -- ಪಾಪಗಳನ್ನು ಅನುಭವಿಸು ವುದೂ ಅವನೊಬ್ಬನೇ; ನೆಲದ ಮೇಲೆ ಮರದ ತುಂಡಿನಂತೆ ಸತ್ತುಬೀಳುವ ಶರೀರವನ್ನು ನೋಡಿ ಯಾದಮೇಲೆ, ಬಂಧು -- ಬಾಂಧವರೆಲ್ಲ ಅವರ ವರ ಮನೆಗೆ ಹಿಂದಿರುಗುತ್ತಾರೆ; ಅವನನ್ನು ಹಿಂಬಾ ಲಿಸುವುದು ಈ ಜೀವನದಲ್ಲಿ ಗಳಿಸಿದ ಧರ್ಮ ಮಾತ್ರ. ಆದ್ದರಿಂದ ಅಂತ್ಯಕಾಲದಲ್ಲಿ ತನ್ನ ಸಹಾ ಯಕ್ಕೋಸ್ಕರ ಧರ್ಮವನ್ನು ಪ್ರತಿಯೊಬ್ಬನೂ ಆಚ ರಿಸಬೇಕು. ಕೇವಲ ಧರ್ಮದ ಸಹಾಯದಿಂದ ಮಾತ್ರ ವ್ಯಕ್ತಿಯೊಬ್ಬ ದಾಟಲಸಾಧ್ಯವಾದ ತಮಸ್ಸನ್ನು -- ಕತ್ತಲು ತುಂಬಿದ ಲೋಕವನ್ನು ದಾಟಬಲ್ಲ -- ಎಂಬುದು ಧರ್ಮಶಾಸ್ತ್ರಕಾರರ ಸ್ಪಷ್ಟ ಅಭಿಪ್ರಾಯ.

ಏಕಃ ಪ್ರಜಾಯತೇ ಜಂತುಃ
ಏಕ ಏವ ಪ್ರಲೀಯತೇ
ಏಕೋಽನು ಭುಂಕ್ತೇ ಸುಕೃತಂ
ಏಕ ಏವ ಚ ದುಷ್ಕೃತಮ್
ಮೃತಂ ಶರೀರಮುತ್ಸೃಜ್ಯ
ಕಾಷ್ಠಲೋಷ್ಠ ಸಮಂಕ್ಷಿತೌ
ವಿಮುಖಾ ಬಾಂಧವಾ ಯಾಂತಿ
ಧರ್ಮಸ್ತಮನುವರ್ತತೇ
ತಸ್ಮಾದ್ಧರ್ಮಂ ಸಹಾಯಾರ್ಥಂ
ನಿತ್ಯಂ ಸಂಚಿನುಯಾಚ್ಛನೈಃ
ಧರ್ಮೇಣ ಹಿ ಸಹಾಯೇನ
ತಮಸ್ತರತಿ ದುಸ್ತರಮ್
(ಮ. ಸ್ಮೃ. : IV --೨೪೦--೨೪೨)

ಧರ್ಮಶಾಸ್ತ್ರಗಳ ಪ್ರಕಾರ ಈ ಪವಿತ್ರ ಭಾರತದ ಸನಾತನ ಧರ್ಮಾನುಯಾಯಿಯಾದ ಗೃಹಸ್ಥನೊ ಬ್ಬನ ಮನೆ ಪ್ರಕೃತ ವಾಸಿಸುತ್ತಿರುವ ಅವನ ಅಥವಾ ಅವನ ಕುಟುಂಬವರದ್ದು ಮಾತ್ರವಲ್ಲ, ಅದು ಅವನ ಹಿಂದಿನ ಪಿತೃ -- ಪಿತಾಮಹಾದಿಗಳದು; ಮನೆಯ ಅಧಿದೇವತೆಯಾದ ಅಗ್ನಿಯದು. ಆದ್ದರಿಂದ ಆ ಅಗ್ನಿಯ ಸನ್ನಿಧಿಯಲ್ಲಿ ಗೃಹಸ್ಥನು ಪಂಚಮಹಾಯ ಜ್ಞಗಳನ್ನು ನೆರವೇರಿಸಬೇಕು. ಪ್ರತಿನಿತ್ಯ ಪಿತೃಯಜ್ಞದ ಹೊತ್ತಿನಲ್ಲಿ ತನ್ನ ಹಿಂದಿನ ಪಿತೃದೇವತೆಗಳನ್ನು ಸ್ಮರಿ ಸಬೇಕು. ಸಾಮಾಜಿಕ ವ್ಯವಸ್ಥೆಯಲ್ಲಿ ತೀರ ಕೆಳಸ್ತರದ ಲ್ಲಿರುವವರೂ ಸಹ ಧರ್ಮಸಂಪಾದನೆಗಾಗಿ, ಸದಾ ಚಾರ ಸಂಪನ್ನರಾಗಿ, ಅಮಂತ್ರಕವಾಗಿ ಈ ಪಂಚಮ ಹಾಯಜ್ಞವನ್ನು ನೆರವೇರಿಸಬಹುದೆಂದು ಘೋಷಿ ಸುತ್ತದೆ. ಧರ್ಮಶಾಸ್ತ್ರ--

ಧರ್ಮೋಪ್ಸವಸ್ತು ಧರ್ಮಜ್ಞಾಃ
ಸತಾಂ ವೃತ್ತಮನುಷ್ಠಿತಾಃ
ಮಂತ್ರವರ್ಜ್ಯಂ ನದುಷ್ಯನ್ತಿ
ಪ್ರಶಂಸಾಂ ಪ್ರಾಪ್ನುವನ್ತಿ ಚ
(ಮ. ಸ್ಮೃ. : X --೧೨೭)

ಇದನ್ನೇ ಯಾಜ್ಞವಲ್ಕ್ಯ ಸ್ಮೃತಿ ಮತ್ತಷ್ಟು ಸ್ಪಷ್ಟವಾ ಗಿಯೇ --

ಪುನಃ ಶೂದ್ರಾಃ ಸ್ವಧರ್ಮವೇದಿನೋ
ಧರ್ಮಪ್ರಾಪ್ತಿಕಾಮಾಃ ತ್ರೈವರ್ಣಿಕಾನಾಂ
ಆಚಾರಮನಿಷಿದ್ಧಮಾಶ್ರಿತಾಃ
ತೇ ನಮಸ್ಕಾರೇಣ ಮಂತ್ರೇಣ
ಪಂಚಮಹಾಯಜ್ಞಾನ್ನಹಾಪಯೇತ್
(ಯಾ. ಸ್ಮೃ. : ೧--೧೨೭)

ಎನ್ನುತ್ತದೆ. ಆದ್ದರಿಂದ ಒಂದು ವಿಧದ ಆಧ್ಯಾತ್ಮಿಕ ನಿರಂತರತೆಯ ಮನಸ್ತತ್ತ್ವವೇ ಸನಾತನ ಧರ್ಮಾನು ಯಾಯಿಗಳ ಕುಲಧರ್ಮ ಅಥವಾ ಕುಲಪರಂಪರೆ. ಮನೆಯಲ್ಲಿ ಪ್ರಕೃತ ವಾಸಿಸುವವರು, ಹಿಂದೆ ತಮ್ಮ ಪಿತೃಗಳಿಗೆ ಸೇರಿದ ಮತ್ತು ಮುಂದೆ ತಮ್ಮ ಸಂತತಿಗೆ ಸಲ್ಲುವ ಮನೆಯ ವಿಶ್ವಸ್ತರು ಮಾತ್ರ.

ಈ ಹಿನ್ನೆಲೆಯಲ್ಲಿ ಗೃಹಸ್ಥನು ತನ್ನ ಮನೆಯಲ್ಲಿ ಒಂದು ವಿಧವಾದ ಅಲಿಪ್ತತ್ವ ಅಥವಾ ಸನ್ಯಸ್ತವೃತ್ತಿ ಯಿಂದ ಬದುಕು ಸಾಗಿಸಬೇಕು. ಮನೆಯ ಅಧಿದೇ ವತೆಯಾದ ಅಗ್ನಿದೇವನ ಸಾನ್ನಿಧ್ಯ ಮತ್ತು ಅನುಗ್ರ ಹವನ್ನು ನಿರಂತರವಾಗಿ ನೆನೆ -- ನೆನೆದು ಅವನು ಶಾಂತಮನಸ್ಕನಾಗಿ ಆ ಮನೆಯಲ್ಲಿ ಬಾಳ್ವೆ ಮಾಡ ಬೇಕು. ಮಾತ್ರವಲ್ಲ, 'ಈ ಸಂಸಾರವೇ ಕ್ಷಣ ಭಂಗುರ; ಇದೊಂದು ತಾತ್ಕಾಲಿಕ ಕರ್ಮಭೂಮಿ; ಗೃಹಸ್ಥನಾಗಿ ನನ್ನ ಧರ್ಮಗಳನ್ನು ಶ್ರದ್ಧೆಯಿಂದ, ಚೆನ್ನಾಗಿ ನೆರವೇರಿಸಬೇಕು' -- ಎಂಬ ಮನೋ ಭಾವ ಅವನಲ್ಲಿ ಮೂಡಿಬರಬೇಕು. ಹಾಗಾದಾಗ ಮಾತ್ರ ಆ ಗೃಹಸ್ಥನು ಮುಂದಿನ ಆಶ್ರಮಕ್ಕೆ ಅರ್ಹತೆ ಗಳಿಸುತ್ತಾನೆ ಮತ್ತು ಅಂತಿಮವಾಗಿ ಅವನ ಜೀವ ನದ ಚರಮಗುರಿಯಾದ ಮೋಕ್ಷವೂ ಅವನಿಗೆ ಕರ ತಲಾಮಲಕವಾಗುತ್ತದೆ.



# ಒಂಭತ್ತರ ವೈವಿಧ್ಯ

---ವಿ. ಎಸ್. ರಾಮಾನುಜಾಚಾರ್ಯ.

ನವಮಾಸ :-- ಮನುಷ್ಯ ತಾಯಿಯ ಗರ್ಭದಲ್ಲಿ ವಾಸಮಾಡುವುದು ೯ ತಿಂಗಳು. ಆ ಮೇಲೆ ಅವನ ಜನ್ಮ ಆಗುತ್ತದೆ.

ನವದ್ವಾರ :-- ಮನುಷ್ಯನ ಶರೀರ ಪಾಂಚ ಭೌತಿಕವಾಗಿ ನವದ್ವಾರಗಳು (ಒಂಬತ್ತು ಹೊರ ಮುಖಗಳು) ಉಳ್ಳದ್ದಾಗಿರುತ್ತದೆ. ಅವಾವುವೆಂದರೆ, ೨ ಕಣ್ಣುಗಳು, ೨ ಕಿವಿಗಳು, ೨ ಮೂಗಿನ ದ್ವಾರಗಳು, ೧ ಬಾಯಿ, ಮಲ, ಮೂತ್ರದ್ವಾರಗಳು ಒಂದೊಂದು. ಹೀಗೆ ಒಂಬತ್ತು. ಪುರಂದರದಾಸರು ಹೇಳಿರುವಂತೆ ---

ತುಂಬಿದ ಪಟ್ಟಣಕ್ಕೆ ಒಂಬತ್ತು ಬಾಗಿಲು<br>
ಸಂಭ್ರಮದರಸುಗಳು ಐದುಮಂದಿ

ನವಖಂಡ :-- ನಾವಿರುವ ಭೂಭಾಗವನ್ನು, ಪ್ರಾಚೀನರು ಒಂಬತ್ತು ಖಂಡಗಳಾಗಿ ವಿಂಗಡಿಸಿದ್ದಾರೆ. ಅವು ಯಾವುವೆಂದರೆ--

೧) ಭಾರತ, ೨) ನವಭೂ, ೩) ಕಿಂಪುರುಷ, ೪) ಹರಿವರ್ಷ, ೫) ಭದ್ರಾಶ್ವ ೬) ಉತ್ತರ ಕುರು, ೭) ಹಿರಣ್ಮಯ, ೮) ಇಳಾವೃತ್ತ ಮತ್ತು ೯) ಕೇತುಮಾಲಾ. ಕೆಲವರ ಅಭಿಪ್ರಾಯದಂತೆ ನವಭೂ, ಮತ್ತು ಉತ್ತರ ಕುರುಗಳಿಗೆ ವ್ಯತ್ಯಸ್ಥವಾಗಿ ಕುಶ, ರಮ್ಯ ಎಂಬ ಎರಡು ಖಂಡಗಳನ್ನು ಉಲ್ಲೇಖಿಸಿದ್ದಾರೆ.

ನವಗ್ರಹ :-- ನಮ್ಮೆಲ್ಲರ ಭೂತ, ವರ್ತಮಾನ, ಭವಿಷ್ಯಗಳ ಹಿನ್ನೆಲೆ ನಾಯಕರು ಒಂಬತ್ತು ಮಂದಿ. ನಮ್ಮನ್ನು ದಿನನಿತ್ಯ ಓಡಿಸಿ, ಕಾಡಿಸಿ, ಆಡಿಸುವವರು ಇವರು ಎನ್ನುತ್ತಾರೆ ಜ್ಯೋತಿಶ್ಶಾಸ್ತ್ರಕಾರರು, ಅವರು ನಭೋಮಂಡಲದಲ್ಲಿ ವಿರಾಜಿಸುವ 'ನವಗ್ರಹ'ಗಳು.

ನಮಃ ಸೂರ್ಯಾಯ ಚಂದ್ರಾಯ<br>
ಮಂಗಳಾಯ ಬುಧಾಯ ಚ<br>
ಗುರು ಶುಕ್ರಃ ಶನಿ ಭ್ಯಶ್ಚ<br>
ರಾಹವೇ ಕೇತವೇ ನಮಃ

ಎಂಬ ಈ ಶ್ಲೋಕದ ಮೂಲಕ ಪರಿಚಿತರಾದ, ಸೂರ್ಯ, ಚಂದ್ರ, ಕುಜ, ಬುಧ, ಗುರು, ಶುಕ್ರ, ಶನಿ, ರಾಹು, ಕೇತುಗಳು. ಇವರು ತಮ್ಮ ಸಂಚಾರ ಬಲದಿಂದ ನಮ್ಮನ್ನು "ಗ್ರಹಚಾರ" ರೂಪವಾಗಿ ಕಾಡುತ್ತಾರೆ. ಇದರಲ್ಲಿ ಶನಿಪ್ರಭಾವ ಎಂದಾಕ್ಷಣ ನಮಗೆ ಹೊಳೆಯುವುದು 'ಹರಿಶ್ಚಂದ್ರ', 'ವಿಕ್ರಮ', ಮತ್ತು 'ನಳ' ಚರಿತ್ರೆಗಳು. ಶುಭಕಾರ್ಯಗಳಿಗೆ ಗುರು ಬಲ ಇರಬೇಕು. ವೈಭವವಾಗಿ ಬಾಳುವುದು, ಶುಕ್ರ ದೆಶೆಯಲ್ಲಿ -- ಮುಂತಾದುವು ಪ್ರಸಿದ್ಧವಾಗಿವೆ.

ನವಧಾನ್ಯ :-- ಆಗಾಗ ಜೀವನದಲ್ಲಿ ಆಗುವ ಏರು ಪೇರುಗಳಿಗೆ ನವಗ್ರಹಗಳ 'ಗ್ರಹಚಾರ' ನಾಟಕ ಕಾರಣವೆಂದು ಹಿರಿಯರು ಅಂತಹ ಗ್ರಹ ಶಾಂತಿಗಾಗಿ, ಅಳವಡಿಸಿರುವ ಧಾನ್ಯಗಳು ಒಂಬತ್ತು. ಅವು ಯಾವುವೆಂದರೆ, ಗೋಧಿ, ಭತ್ತ, ತೊಗರಿ, ಹೆಸರು, ಕಡಲೆ, ಅವರೆ, ಎಳ್ಳು, ಉದ್ದು ಮತ್ತು ಹುರುಳಿ. ಇವುಗಳನ್ನು ಕ್ರಮವಾಗಿ ಪೂಜಿಸಿ ಆಯಾಯಾ ಗ್ರಹದ ಅನುಗ್ರಹ ಪಡೆಯಲು ಇವನ್ನು ದಾನಮಾಡಬೇಕು ಎನ್ನುತ್ತಾರೆ. ಸೂರ್ಯನಿಗೆ ಗೋಧಿ, ಚಂದ್ರನಿಗೆ ಭತ್ತ, ಕುಜನಿಗೆ ತೊಗರಿ, ಬುಧನಿಗೆ ಹೆಸರು, ಗುರುವಿಗೆ ಕಡಲೆ, ಶುಕ್ರನಿಗೆ ಅವರೆ, ಶನಿಗೆ ಎಳ್ಳು, ರಾಹುವಿಗೆ ಉದ್ದು ಮತ್ತು ಕೇತುವಿಗೆ ಹುರುಳಿ ಇವು ಇಷ್ಟ. ಆಯಾಯಾ ಗ್ರಹಶಾಂತಿಗೆ ಆಯಾಯಾ ಧಾನ್ಯ ದಾನಮಾಡಿದರೆ ಗ್ರಹಗಳ ನಿಗ್ರಹಕ್ಕೆ ಪಾತ್ರನಾಗುವುದಿಲ್ಲ ಎಂದು ಜ್ಯೋತಿಷ್ಕರ ಅಭಿಪ್ರಾಯ.

ನವರತ್ನ :-- ಎಲ್ಲರಿಗೂ ಎಲ್ಲಾ ಕಾಲಕ್ಕೂ ಬೇಕಾದುದು ಹಣ. 'ದುಡ್ಡಿದ್ದವನು ದೊಡ್ಡಪ್ಪ', 'ಹಣವಿಲ್ಲದವನು ಹೆಣ', 'ಸರ್ವೇಜನಾಃ ಕಾಂಚನಮಾಶ್ರಯಂತಿ' ಎಂಬಿವೇ ಮುಂತಾದುವು ಅನುಭವ ಪೂರ್ಣ ನುಡಿ ಮುತ್ತುಗಳು. ಸಾಮಾನ್ಯವಾಗಿ ಚಿನ್ನ ಬೆಳ್ಳಿ, ಹಣಕಾಸುಗಳು ಎಲ್ಲರನ್ನೂ ಇರಬಹುದಾದರೂ, ಇವೆಲ್ಲಕ್ಕಿಂತ ಅತ್ಯಮೂಲ್ಯವಾದುವು ನವರತ್ನಗಳು. ಇವನ್ನು ಶ್ರೀಮಂತರು ಮಾತ್ರ ಪಡೆಯಬಲ್ಲರು. ಇಂತಹವು ಮುಖ್ಯವಾಗಿ 'ಒಂಬತ್ತು' ಇವೆ. ಅವುಗಳಾವುವೆಂದರೆ:-- ಮರಕತ, ಮಾಣಿಕ್ಯ ಗೋಮೇಧಿಕ, ಪುಷ್ಯರಾಗ, ಪಚ್ಚೆ, ನೀಲ, ಮುತ್ತು, ರತ್ನ ಮತ್ತು ಹವಳಗಳು. ಅಥವಾ ಇನ್ನೊಂದು ವಿಧವಾದ ವಿಭಾಗ :-- ವಜ್ರ, ಕೆಂಪು (ಮಾಣಿಕ್ಯ), ನೀಲಮಣಿ, ಪಚ್ಚೆ ಅಥವಾ ಮರಕತ, ಪುಷ್ಯರಾಗ, ವೈಡೂರ್ಯ, ಗೋಮೇಧಿಕ, ಮುತ್ತು ಮತ್ತು ಹವಳಗಳು. ಇವುಗಳಲ್ಲಿ ಕೆಲವು ಅತ್ಯಮೂಲ್ಯವಾಗಿ ಉತ್ತಮದರ್ಜೆಗೆ ಸೇರಿದವಾದರೆ, ಮಿಕ್ಕವು ಮಧ್ಯಮ ವರ್ಗರತ್ನಗಳು. ವಜ್ರ, ನೀಲ, ಪಚ್ಚೆ, ರತ್ನ ಮತ್ತು ಮುತ್ತುಗಳು ಪ್ರಶಸ್ತ. ಮಿಕ್ಕವು ಕೆಳದರ್ಜೆಯವು. ಇವುಗಳ ವಿಭಾಗ, ಆಯಾಯಾ ರತ್ನಗಳ ಹೊಳಪು ಕಾಠಿಣ್ಯ (Hardness) ಮತ್ತು ಸ್ಥಿರತ್ವಗಳನ್ನವಲಂಬಿಸಿದೆ. ೭ ರತ್ನಗಳು ಭೂಗರ್ಭದಲ್ಲಿ ಸಿಗುವುವು ಇನ್ನೆರಡು -- ಮುತ್ತು ಮತ್ತು ಹವಳ ಸಮುದ್ರಗರ್ಭದಲ್ಲಿ ಲಭ್ಯ. ಪ್ರಾಚೀನಕಾಲಕ್ಕೆ ಈ ಎಲ್ಲ 'ರತ್ನಗರ್ಭ' ಆಗಿದ್ದುದು ನಮ್ಮ ಭಾರತದೇಶ. ಪರದೇಶಿಗಳು ಸೂರೆಗೊಂಡು ತಮ್ಮ ದೇಶಕ್ಕೆ ಒಯ್ದರು. ಈಗ ಕೆಲವಷ್ಟೇ ಭಾರತದಲ್ಲಿ ಸಿಕ್ಕುತ್ತವೆ. ಆದರೆ ಪರದೇಶದಲ್ಲಿ ಹೇರಳವಾಗಿ ಪ್ರಾಪ್ತವಾಗುತ್ತವೆ. ವಜ್ರಗಳು ದಕ್ಷಿಣ ಅಮೇರಿಕಾ, ದಕ್ಷಿಣ ಆಫ್ರಿಕಾ (ಕಿಂಬರ್ಲಿ) ದಲ್ಲೂ, ವೈಢೂರ್ಯಗಳು ಸಂಯುಕ್ತ ಅಮೇರಿಕಾ, ಮೆಕ್ಸಿಕೋ, ಸಿಲೋನ್, ಬರ್ಮಾಗಳಲ್ಲೂ ಬ್ರೆಸಿಲ್‌ನಲ್ಲಿ ಬಹಳವಾಗಿಯೂ ಸಿಕ್ಕುತ್ತವೆ. ಕೆಂಪು ನೀಲಮಣಿಗಳು ಬರ್ಮಾ, ಸಯಾಂ, ಸಿಲೋನ್, ಕಾಶ್ಮೀರದಲ್ಲಿ ಸಿಕ್ಕರೆ, ಕಾಶ್ಮಿರದಲ್ಲಿ ನೀಲಗಳು ಹೇರಳವಾಗಿ ಸಿಕ್ಕುತ್ತವೆ. ಮತ್ತೆ ಆಫ್‌ಘಾನಿಸ್ಥಾನದಲ್ಲಿ ಕೆಂಪುಗಳೂ, ಆಸ್ಟ್ರೇಲಿಯಾದಲ್ಲಿ ಕೆಂಪು ನೀಲಗಳೂ, ಪಚ್ಚೆಗಳು ಈಜಿಪ್ಟ್‌ನಲ್ಲೂ ಜಪಾನ, ಸ್ಕಾಟ್ಲೆಂಡ್, ಐರ್ಲಂಡುಗಳಲ್ಲೂ ದೊರಕುತ್ತವೆ. ಮುತ್ತುಗಳು ಸಿಲೋನ್‌ನಿನ ಸುತ್ತ ಸಮುದ್ರಗಳಲ್ಲೂ ಪರ್ಷಿಯನ್ ಕೊಲ್ಲಿಯಲ್ಲೂ ಸಿಕ್ಕರೆ, ಹವಳಗಳು ಮೆಡಿಟರೇನಿಯನ್ ಸಮುದ್ರ ಮತ್ತು ನೇಪಲ್ಸ್‌ನಲ್ಲಿ ಸಿಗಬಹುದಾಗಿದೆ.

ಅನರ್ಘ್ಯವಾದ ಹೆಸರಾಂತ ವಜ್ರಗಳು ಕೆಲವೇ ಇವೆ. ಎಲ್ಲರಿಗೂ ತಿಳಿದ 'ಕೋಹಿನೂರು ವಜ್ರ' ಈಗ ಲಂಡನ್‌ನಲ್ಲಿದೆ. ಹಿಂದೆ ಇದು ನಮ್ಮ ದೇಶದ ಬಹುಮೂಲ್ಯ ವಜ್ರವಾಗಿತ್ತು. (ಆಂಧ್ರ ದೇಶದ ಕೊಂಡಪಲ್ಲಿಯ ಬಳಿಯ ಗಣಿಗಳದ್ದು ಇದ್ದು, ಬರೋಡಾ ಮಹಾರಾಜ ಗಾಯಕವಾಡರ ಭಂಡಾರದಲ್ಲಿ ಪ್ರಸಿದ್ಧ ಮೂರು ವಜ್ರಗಳಿವೆ. 'ಅಕ್ಬರ್‌ಷಾ' ಎಂಬ ವಜ್ರ, 'ಯೂಜೆನೀ' ಎಂಬ ವಜ್ರ ಮತ್ತು 'ಸ್ಟಾರ್ ಆಫ್ ದಿ ಸೌತ್' ಎಂಬ ವಜ್ರ ಇವು. 'ವಿಕ್ಟೋರಿಯಾ' ಎಂಬ ವಜ್ರ ಹೈದರಾಬಾದ್ ನಿಜಾಮರ ಬಳಿಯೂ, 'ಕಲ್ಲಿನನ್' ಎಂಬ ಅತ್ಯಂತ ದೊಡ್ಡ ವಜ್ರ ಇಂಗ್ಲೆಂಡ್ ಚಕ್ರವರ್ತಿಯ ಕಿರೀಟದಲ್ಲಿತ್ತು. ಈಗ ರಾಣಿ ಎಲಿಜಬತ್ ಅವರು ಸಮಾರಂಭ ಕಾಲದಲ್ಲಿ ಧರಿಸುತ್ತಾರೆ. ಇನ್ನೂ ಕೆಲವು ಬೆಲೆಬಾಳುವ ವಜ್ರಗಳೂ ಅಲ್ಲಲ್ಲಿವೆ.

ನವನಿಧಿ :-- ಕುಬೇರ, ಈರೇಳು ಲೋಕಗಳಲ್ಲೂ ಅತ್ಯಂತ ಶ್ರೀಮಂತನೆಂದು ಪ್ರಾಚೀನಗ್ರಂಥಗಳು ಸಾರಿವೆ. ಇವನ ಹತ್ತಿರ ಅತ್ಯಂತ ಅಮೋಘವಾದ ಸುವರ್ಣ ಭಂಡಾರವಿದೆ. ಇದಕ್ಕೆ 'ನವನಿಧಿ'ಗಳೆಂದು ಹೆಸರು. ಇವನು ಸಾಕ್ಷಾತ್ ತಿರುಪತಿ ತಿಮ್ಮಪ್ಪ (ವೆಂಕಟಾಚಲಪತಿ) ನಿಗೆ ಮದುವೆಗಾಗಿ ಬೃಹತ್ ಹಣ ಸಾಲವಾಗಿ ಕೊಟ್ಟನಂತೆ.

ಸ್ವಾಮಿ ವೆಂಕಟಾಚಲಪತಿ ಈ ಸಾಲ ತೀರಿಸಬೇಕಂತೆ. ಸ್ವಾಮಿ ಗೋವಿಂದರಾಜರು ಹಣವನ್ನು ಅಳೆದೂ ಅಳೆದೂ ಕುಬೇರನಿಗೆ ಕೊಡುತ್ತಾನಂತೆ. ಇಷ್ಟೂ ಹೊತ್ತಿಗೆ ಸಾಲವೆಲ್ಲಾ ತೀರಿರಬೇಕು. ಕಲಿಯುಗದ ಕೊನೆಯ ವರೆಗೆ ಸಾಲ ತೀರಿಸುವ ಮತೂ ಇದೆ. ಈಗ ಹಣವೆಲ್ಲಾ ಸ್ವಾಮಿಯ ಚರಸ್ಥಿರಗಳಾಗಿರುವುದು ಕಾಣಬಹುದು. ಸಾಲದ ಹಣ ತೀರಿದ ಮೇಲೆ ಅಳೆದು ಕೊಟ್ಟ ಗೋವಿಂದರಾಜರು ಈಗ ಕೊಳಗೆ ತಲೆಕೆಳಗಿಟ್ಟುಕೊಂಡು ಹಾಯಾಗಿ ಮಲಗಿಬಿಟ್ಟಿದ್ದಾನೆ. ಕುಬೇರನ ನವನಿಧಿಗಳು ಹೀಗಿವೆ---

೧) ಪದ್ಮ ೨) ಮಹಾಪದ್ಮ ೩) ಶಂಖ, ೪) ಮಕರ, ೫) ಕಚ್ಛಪ, ೬) ಮುಕುಂದ, ೭) ನಂದ, ೮) ನೀಲ ಮತ್ತು ೯) ಖರ್ವ.

ಇವು ಎಣಿಸಲಾರದಷ್ಟು ನಿಧಿಗಳು. ಅಸಂಖ್ಯಾತವಾದ ನಿಧಿ ಮತ್ತು ಅಕ್ಷಯ, ಅವಿನಾಶಿಯಾದ ನಿಧಿಗಳು. ಈ ಕುಬೇರ ತಿರುಗಾಡುವುದು 'ಪುಷ್ಪಕ' ಎಂಬ ಸ್ವಯಂಚಾಲಿತ ವಿಮಾನದಲ್ಲಿ.

ನವರಸ:-- ಶ್ರೇಷ್ಠ ಕವಿ, ಕಾವ್ಯನಾಟಕಗಳನ್ನು ರಚಿಸಿದ್ದಾರೆ. ಅಂತಹವನು ನಾಟಕಗಳಲ್ಲಿ ಉಪಯೋಗಿಸುವ ರಸಗಳು ಒಂಬತ್ತು. ಅವು 'ನವರಸ'ಗಳೆಂದು ಪ್ರಸಿದ್ಧವಾಗಿದೆ. ಅವು ಯಾವುವೆಂದರೆ---

ಶೃಂಗಾರ, ವೀರ, ಕರುಣ,
ಅದ್ಭುತ ಹಾಸ್ಯ ಭಯಾನಕಾಃ
ಭೀಭತ್ಸ, ರೌದ್ರೇ ಚ ರಸಾಃ
ನ ವೇತಿ ಪ್ರತಿತಾ ಭುವಿ

ಈ ನವರಸಗಳಲ್ಲಿ ಒಂದೊಂದು ನಾಟಕದಲ್ಲೂ ಒಂದೊಂದು ರಸ ಪ್ರಾಧಾನ್ಯವಾಗಿ ಮಿಕ್ಕ ರಸಗಳು ಅಲ್ಲಲ್ಲಿ ಗೌಣವಾಗಿ ಕಾಣಬರುವುವು. ಇವುಗಳಿಲ್ಲದ ಯಾವನಾಟಕ ತಾನೇ ರಮಣೀಯವಾದೀತು. ರುಚಿಸೀತು, ರಸದೂಟವಾದೀತು. ಇವಿಲ್ಲದ ನಾಟಕ, ಕಾವ್ಯಗಳು ನೀರಸಗಳಾಗುವುವಷ್ಟೇ, ಈ ನಾಟಕಗಳನ್ನು ಒಂಬತ್ತು ವಿಧ ನಾಯಕರೂ ಇರುತ್ತಾರೆ. ಅವರಲ್ಲಿ ಧೀರೋದಾತ್ತ, ಧೀರಶಾಂತ, ಧೀರಲಲಿತ ಮುಂತಾದವರು ನಾಯಕರು. ಕಾಳಿದಾಸನ ಮೇಘದೂತ ಶ್ರೇಷ್ಠ ಶೃಂಗಾರ ಕಾವ್ಯ -- ರಾಮಾಯಣದಲ್ಲಿ ಕರುಣಾರಸ ಪ್ರಾಮುಖ್ಯ

**ನವ ಮಣಿಗಳು :-- ವಿಕ್ರಮಾರ್ಕನ ಆಸ್ಥಾನದಲ್ಲಿ** 'ನವಮಣಿ'ಗಳೆಂಬ ಒಂಬತ್ತು ಕವಿ ಶ್ರೇಷ್ಠರು ವಿರಾಜಮಾನರಾಗಿದ್ದರು. ಐತಿಹಾಸಿಕ ದೃಷ್ಟಿಯಲ್ಲಿ ಈ ಕವಿಗಳ ಕಾಲದೇಶ ವರ್ತಮಾನಗಳು ವ್ಯತ್ಯಾಸವಾಗಿರಬಹುದು. ಆದರೆ ಅಲ್ಲಿ ಸೂಚಿತವಾಗಿರುವ ಒಂಬತ್ತು ಕವಿಗಳೂ ಸಂಸ್ಕೃತ ಸಾಹಿತ್ಯ ಕ್ಷೇತ್ರದ ನವ ಸೂರ್ಯರು. ನವರತ್ನಗಳು ಎಂದೆಂದಿಗೂ ಮರೆಯಲಾಗದ ಸಂಸ್ಕೃತ ಕರ್ತರಿವರು. ಅವರುಗಳು ಯಾರೆಂದರೆ :--

ಧನ್ವಂತರಿ, ಕ್ಷಪಣಕ, ಅಮರಸಿಂಹ, ಶಂಕು,
ವೇತಾಲಭಟ್ಟ, ಘಟಕರ್ಪರ, ಕಾಳಿದಾಸಾಃ,
ಖ್ಯಾತೋವರಾಹ ಮಿಹಿರೋ ನೃಪತೇಃ
ಸಭಾಯಾಂ,
ರತ್ನಾನಿವೈ ವರರುಚಿಃ ನೃಪ ವಿಕ್ರಮಸ್ಯ

## "ಒಂಬತ್ತು" ವಿಧವಿಧ

ನವಕಾಂಡ ಋಷಿಗಳು :-- ವರ್ಷಕ್ಕೊಮ್ಮೆ ಶ್ರಾವಣ ಪೌರ್ಣಮಿ ದಿನ ವೇದಾರಂಭ ಮಾಡುತ್ತಾರೆ. ಅದಕ್ಕೆ 'ಉಪಾಕರ್ಮ' ಎಂದು ದಕ್ಷಿಣ ಭಾರತದಲ್ಲಿ ಕರೆದರೆ, ಇದನ್ನೇ ಉತ್ತರ ಭಾರತದವರು "ರಕ್ಷಾಬಂಧನ" ಎನ್ನುವರು. ಈ ದಿನದಲ್ಲಿ ದಕ್ಷಿಣ ಭಾರತದಲ್ಲಿ ಬೆಳಗ್ಗೆ ಅಷ್ಟು ಹೊತ್ತಿಗೇ ಎದ್ದು 'ಕಾಮೋಕಾರ್ಷೀತ್' ಎಂಬ ೧೦೦೮ ಜಪ ಮಾಡಿ ಯಜ್ಞೋಪವೀತ ಧರಿಸಿ, ಋಷಿತರ್ಪಣ ಅಂತ ಮಾಡುತ್ತಾರೆ. ಅಂತಹ ಋಷಿಗಳು ಒಂಬತ್ತು ಮಂದಿ.

ಅವರು :--

೧) ಪ್ರಜಾಪತಿ ಕಾಂಡ ಋಷಿ
೨) ಸೋಮಕಾಂಡ ಋಷಿ
೩) ಅಗ್ನಿಕಾಂಡ ಋಷಿ
೪) ವಿಶ್ವೇದೇವಕಾಂಡ ಋಷಿ
೫) ಸಾಂಹಿಕೀರ್ದೇವತಾ ಉಪನಿಷತ್ ಋಷಿ
೭) ವಾರುಣೀರ್ದೇವತಾ ಉಪನಿಷತ್ ಋಷಿ
೮) ಬ್ರಹ್ಮಾಸ್ವಯಂಭೂ
೯) ಸದಸಸ್ಪತಿ

ಇವರು "ನವಕಾಂಡ ಋಷಿ"ಗಳೆಂದು ಪ್ರತೀತರಾಗಿರುವರು.

ನವವ್ಯಾಕರಣಗಳು :-- ವ್ಯಾಕರಣವಾದುದು ಯಾವ ಭಾಷೆಯದಾದರೂ ಅದು ಆ ಭಾಷೆಯನ್ನು ಶುದ್ಧಗೊಳಿಸುವ ಕಾರ್ಯಪ್ರವರ್ತಕಗ್ರಂಥ. ಅಕ್ಷರೋಚ್ಚಾರಣ ರೀತಿಯಿಂದ ಹಿಡಿದು ಭಾಷೆಗಳ ನಡೆ, ನುಡಿ ಮುಂತಾದುವುಗಳ ಬೋಧನೆಯಿಂದ ಶುದ್ಧವಾದ ಭಾಷೆ ಹೇಗಿರಬೇಕೆಂದು ಇದು ತಿಳಿಸುತ್ತದೆ. ರಾಮಾಯಣದ ಒಂದು ಪ್ರಕರಣ. ಸುಗ್ರೀವ ತನ್ನೆಡೆಗೆ ಬರುತ್ತಿದ್ದ ರಾಮಲಕ್ಷ್ಮಣರನ್ನು ಕಂಡು ಅವರು ವಾಲಿಯ ಕಡೆಯರಿರಬಹುದೆಂದು ಹೆದರಿ ಅದನ್ನು ಖಚಿತವಾಗಿ ತಿಳಿಯಲು ಮಹಾಮೇಧಾವಿಯಾದ ಹನುಮಂತನನ್ನು ಅವರ ಬಳಿಗೆ ಕಳುಹಿಸುತ್ತಾನೆ. ಮಧುರವಾಗಿ ಅಡೆತಡೆಗಳಿಲ್ಲದೇ ಶುದ್ಧ ಭಾಷೆಯಲ್ಲಿ ಮಾತನಾಡಿದ ಅವನ ಭಾಷಾ ಪಾಂಡಿತ್ಯಕ್ಕೆ ಬೆರಗಾಗಿ ರಾಮನು ಲಕ್ಷ್ಮಣನಿಗೆ ಹೇಳುತ್ತಾನೆ :--

ನೂನಂ ವ್ಯಾಕರಣಂ ಕೃತ್ಸ್ನಂ
ಅನೇನ ಬಹುದಾಶ್ರುತಂ
ಬಹು ವ್ಯಾಹರತಾನೇನ
ನ ಕಿಂಚಿದ ಪಶಬ್ದಿತಂ
ನ ಮುಖೇ ನೇತ್ರಯೋರ್ವಾಪಿ
ಲಲಾಟೇ ಚ ಭ್ರುವೋಸ್ತಥಾ
ಅನ್ಯೇಷ್ವ ಪಿಚಗಾತ್ರೇಷು
ದೋಷಾಃ ಸಂವಿದಿತಃ ಕ್ವಚಿತ್
ಅವಿಸ್ತರಂ ಅಸಂದಿಗ್ಧಂ
ಅವಿಲಂಬಿತಂ ಅಧ್ರುತಂ
ಉರಸ್ಥಂ ಕಂಠನಂ ವಾಕ್ಯಂ
ವರ್ತತೇ ಮಧ್ಯಮೇ ಸ್ವರೇ
ಸಂಸ್ಕಾರ ಕ್ರಮ ಸಂಪನ್ನಾಂ
ಅಧ್ರುತಾಂ ಅವಿಲಂಬಿತಾಂ
ಉಚ್ಚಾರಯತಿ ಕಲ್ಯಾಣೀಂ
ವಾಚಂ ಹೃದಯಹಾರಿಣೀಂ
ಅನಯಾಚಿತ್ರ ಯಾವಾಚಾ
ತ್ರಿಸ್ಥಾನ ವ್ಯಂಜನಸ್ಥಥಾ
ಕಸ್ಯ ನಾರಾಧ್ಯತೇ ಚಿತ್ತಂ
ಉದ್ಯತಾ ಸೇರರೇರಪಿ

ಇತ್ಯಾದಿ ಇತ್ಯಾದಿ.

ಲಕ್ಷ್ಮಣ, ನೋಡು, ಇಷ್ಟು ಹೊತ್ತು ಮಾತನಾಡಿದರೂ ಮುಖದಲ್ಲಿ ಕಣ್ಣುಗಳಲ್ಲಿ ಹುಬ್ಬುಗಳಲ್ಲಿ ಮತ್ತು ಮಿಕ್ಕ ಅಂಗಗಳಲ್ಲಿ ಯಾವ ವಿಕಾರವೂ ಕಾಣಲಿಲ್ಲ. ಮಾತನಾಡುವಾಗ ತೀರನಿಧಾನವೂ ಇಲ್ಲ ತೀರವೇಗವೂ ಇಲ್ಲ. ಸ್ಪಷ್ಟವಾಗಿ ಮಧ್ಯಮ ಸ್ವರದಲ್ಲಿ ಮಧುರವಾಗಿ ಕಿವಿಗಿಂಪಾಗಿ ಅಲ್ಲದೆ ಹೃದಯವನ್ನು ಸೆಳೆಯುವಂತೆ ಮಾತನ್ನಾಡುತ್ತಾನೆ. ಇಂತಹ ಮಾತುಗಳಿಂದ ವೈರಿಗಳೂ ಕೂಡ ತನ್ನೆಡೆಗೆ ಎಳೆಯಲ್ಪಡುವಂತಿದೆ. ನಿಜಕ್ಕೂ ಈತ ಸಮಸ್ತ ವ್ಯಾಕರಣಗಳನ್ನು ಬಲ್ಲವನೆಂದು ಹೇಳಬಹುದು ಎನ್ನುತ್ತಾನೆ. ವ್ಯಾಕರಣ ಚೆನ್ನಾಗಿ ಕರಗತವಾದಾಗ ಇಂತಹ ಮಾತುಗಳಾಡಲು ಸಾಧ್ಯ ಎಂದು ಅರ್ಥವಾಗುತ್ತದೆ.

**ಪ್ರಖ್ಯಾತವಾದ ವ್ಯಾಕರಣಗ್ರಂಥಗಳು 'ಒಂಬತ್ತು'.** ಅವನ್ನು 'ನವವ್ಯಾಕರಣಗಳು' ಎನ್ನುತ್ತಾರೆ. ಅವಾವುವೆಂದರೆ :

೧) ಐಂದ್ರವ್ಯಾಕರಣ, ೨) ಚಾಂದ್ರ ವ್ಯಾಕರಣ, ೩) ಕಾತಕೃತ್ಸ್ನ ವ್ಯಾಕರಣ, ೪) ಕೌಮಾರ ವ್ಯಾಕರಣ, ೫)

ಶಾಕಟಾಯನ ವ್ಯಾಕರಣ, ೬) ಸಾರಸ್ವತ ವ್ಯಾಕರಣ, ೭) ಕಾಪಿಕಲ ವ್ಯಾಕರಣ, ೮) ಶಾಕಲ ವ್ಯಾಕರಣ, ೯) ಪಾಣಿನೀ ವ್ಯಾಕರಣ.

ನವರಾತ್ರಿ :-- ಆಶ್ವಯುಜ ಶುದ್ಧ ಒಂದರಿಂದ ನವಮಿಯವರೆಗೆ ದುರ್ಗಾಪೂಜೆ, ಲಕ್ಷ್ಮೀಪೂಜೆ, ಸರಸ್ವತೀ ಪೂಜೆ, ಹಯಗ್ರೀವ ಪೂಜೆಗಳನ್ನು ಮಾಡಿ, ಶಕ್ತಿ ಧನವಿದ್ಯಾದೇವಿಗಳ ಸ್ಮರಣೆ ನಮನಗಳನ್ನು ಮಾಡುತ್ತೇವೆ. ಅಷ್ಟಮಿಯಂದು ದುರ್ಗೆಯನ್ನೂ, ನವಮಿಯಂದು ಆಯುಧ ಪೂಜೆ, ಮೂಲ ನಕ್ಷತ್ರದಂದು ಸರಸ್ವತೀ ಆವಾಹನೆ ಪೂಜೆಗಳನ್ನು ಮಾಡಿ ವಿಜಯ ದಶಮಿಯಂದು ವಿಜೃಂಭಣೆಯಿಂದ ದೇವರ ಉತ್ಸವಗಳು, ರಾಮಾಯಣ ಪಟ್ಟಾಭಿಷೇಕ, ದಸರಾ ಮೆರವಣಿಗೆ ಮುಂತಾದುವುಗಳನ್ನು ಮಾಡಿ ಧನ್ಯರಾಗುತ್ತೇವೆ. ದಸರಾ ಹಬ್ಬದಂದು ಮೈಸೂರು ಮಹಾರಾಜರು ಅರಮನೆಯಿಂದ ಆನೆ ಅಂಬಾರಿಯಲ್ಲಿ, ಕುದುರೆ ಸವಾರರು, ಪಟ್ಟದ ಕುದುರೆ, ಆನೆ, ಹಸು, ಶಾಲಾ ಬಾಲಕರು, ಪೋಲೀಸರ ಪಡೆಯೊಡನೆ ಮೆರವಣಿಗೆಯಲ್ಲಿ ಹೊರಟು ಬನ್ನಿಮಂಟಪದಲ್ಲಿ ಶಮೀಪೂಜೆ ಮಾಡಿ ರಾತ್ರಿ ವಿದ್ಯುದ್ದೀಪಾಲಂಕಾರಯುಕ್ತ ರಸ್ತೆಯಲ್ಲಿ ಹಿಂತಿರುಗುವ ದೃಶ್ಯ, ಅರಮನೆ ಪೂರ್ತಾ ವಿದ್ಯುದ್ದೀಪಾಲಂಕಾರ ನೋಡಿ ಆನಂದಿಸಬಹುದಾಗಿತ್ತು. ಈಗದು ಇಲ್ಲವಾಗಿದೆ. ಆದರೆ ಮಹಿಷಾಸುರ ಮರ್ದಿನಿ ಮೆರವಣಿಗೆ ಮುಂತಾದುವು ಉಂಟು.

ನವ ದಿನ ಸಂಕಲ್ಪ ಉತ್ಸವಗಳು :-- ಅಂಕುರಾರ್ಪಣದಿಂದ ಹಿಡಿದು ಶಯನೋತ್ಸವದವರೆಗೆ 'ನವ ದಿನ' ಸಂಕಲ್ಪ ಉತ್ಸವಗಳನ್ನು ಅನೇಕ ದೇವಾಲಯಗಳಲ್ಲಿ ವಿಜೃಂಭಣೆಯಿಂದ ನಡೆಸುತ್ತಾರೆ ಭಕ್ತರಿಂದ ಸೇವಿಸಲ್ಪಟ್ಟು ಆನಂದಿಸುವ ಅವಕಾಶ.

ನವದುರ್ಗೆಗಳು :-- ಬಂಗಾಳದಲ್ಲಿ ನವರಾತ್ರಿ ದಿನಗಳಲ್ಲಿ ನವದುರ್ಗೆಗಳೆಂಬ ಒಂಬತ್ತು ದುರ್ಗಾ ಮೂರ್ತಿಗಳನ್ನು ಶ್ರದ್ಧಾ ಭಕ್ತಿಗಳಿಂದ ಪೂಜಿಸಿ ಕಡೇ ದಿನ ವಿಸರ್ಜಿಸುತ್ತಾರೆ. ಅಂತಹ ನವದುರ್ಗೆಗಳು ಯಾರೆಂದರೆ :--

೧) ಶೈಲಪುತ್ರಿ, ೨) ಬ್ರಹ್ಮಚಾರಿಣೀ, ೩) ಚಂದ್ರಘಂಟಾ, ೪) ಕೂಷ್ಮಾಂಡ, ೫) ಸ್ಕಂದ ಮಾತಾ, ೬) ಕಾತ್ಯಾಯನೀ, ೭) ಕಾಳರಾತ್ರಿ, ೮) ಮಹಾಗೌರಿ ಮತ್ತು ೯) ಸಿದ್ಧಿದಾ.

ಇವರು ಶಕ್ತಿದೇವತೆಯಾದ ಪಾರ್ವತೀದೇವಿಯ ರೂಪಗಳು.

ನವನಾರಸಿಂಹರು :-- ಆಂಧ್ರಪ್ರದೇಶದ ಕರ್ನೂಲ್ ಜಿಲ್ಲೆಯಲ್ಲಿ ಅಹೋಬಿಲ ಅಥವಾ ಅಹೋಬಲವೆಂಬ ನಾರಸಿಂಹ ಕ್ಷೇತ್ರವಿದೆ. ಇಲ್ಲಿಗೆ ಹೋಗಲು ಕಡಪಾ, ನಂದ್ಯಾಲ್ ಪಟ್ಟಣಗಳಿಂದ 'ಆಳ್ಳಗಡ್ಡ' ಎಂಬ ಊರಿಗೆ ಪ್ರತಿದಿನ ಬಹಳ ವಾಹನಗಳು ಒಂದು ಹೋಗುತ್ತಿರುತ್ತವೆ. ಇಲ್ಲಿಗೆ ಹತ್ತಿರ ಅಹೋಬಿಲ ದಿವ್ಯಕ್ಷೇತ್ರ. ಪರ್ವತ ಬುಡದಲ್ಲಿ ಕೆಳ ಅಹೋಬಿಲ ಎನ್ನುವ ಸಣ್ಣಹಳ್ಳಿ ಇದೆ. ಆದರೆ ಇಲ್ಲಿರುವ ಬೆಟ್ಟ ದೊಡ್ಡದು. ಉತ್ತರ ದಕ್ಷಿಣಕ್ಕೆ ಸುಮಾರು ೨೫೦ ಮೈಲಿ ಉದ್ದಕ್ಕೆ ಈ ಬೆಟ್ಟದ ಹರವಿದೆ. ಇದನ್ನು ಗರುಡಾದ್ರಿ ಅಥವಾ ಗರುಡಾಚಲ ಎನ್ನುತ್ತಾರೆ. ಬೆಟ್ಟದ ಉತ್ತರ ಭಾಗಕ್ಕೆ ಶ್ರೀಶೈಲ ಎಂದೂ ದಕ್ಷಿಣ ಭಾಗಕ್ಕೆ ಶೇಷಾಚಲ ಎಂದೂ ಮಿಕ್ಕ ಭಾಗಕ್ಕೆ ವೇದಾಚಲ ಎಂದೂ ಒಟ್ಟೂ ಬೆಟ್ಟಕ್ಕೆ 'ಅಹೋಬಿಲ' ಎಂದೂ ಪ್ರಸಿದ್ಧವಾಗಿದೆ.

ಬೆಟ್ಟದ ಬುಡದಲ್ಲಿರುವ ಕೆಳಗಿನ ಅಹೋಬಿಲದ ಸುತ್ತಲೂ ಕಾಡಿನಿಂದಾವೃತವಾಗಿದೆ. ಇಲ್ಲಿನ ದೇವಸ್ಥಾನಕ್ಕೆ ಮೂರು ಪ್ರಾಕಾರಗಳಿವೆ. ಒಂದನೇ ಪ್ರಾಕಾರದಲ್ಲಿ 'ಪ್ರಹ್ಲಾದವರದನಾರಸಿಂಹ'ರ ದೇವಾಲಯವಿದೆ. ಇಲ್ಲಿ ಲಕ್ಷ್ಮೀನರಸಿಂಹಸ್ವಾಮಿಯ ಶಾಂತಸುಂದರ ಅರ್ಚಾಮೂರ್ತಿ ಇದೆ. ಇದು ನವನಾರಸಿಂಹರಲ್ಲಿ ಒಂದಾಗಿಲ್ಲ. ಆದರೆ ಬೆಟ್ಟದ ಮೇಲಿರುವ ಎಲ್ಲ ಅಹೋಬಿಲದ ನರಸಿಂಹ ಕ್ಷೇತ್ರಗಳ ಉತ್ಸವಮೂರ್ತಿಗಳು ಇಲ್ಲಿದ್ದು ಭಕ್ತರ ಕಣ್ಮನತಣಿಸುವಂತಿವೆ. ಈ ಸನ್ನಿಧಿ ಬೀದಿಯಲ್ಲೇ ಶ್ರೀ ಅಹೋಬಿಲಜೀಯರ್ ಮಠ ವಿರಾಜಮಾನವಾಗಿದೆ.

ಬೆಟ್ಟದ ಮೇಲೆ, ಮೇಲೆ ಮೇಲೆ ಹೋಗುತ್ತಾ 'ನವನಾರಸಿಂಹ' ಸನ್ನಿಧಿಗಳು ಇವೆ. ಮೇಲೆ ಅನೇಕ ಸನ್ನಿಧಿಗಳು ಗಹನ ಕಾಡಿನ ಮಧ್ಯದಲ್ಲಿವೆ. ಎಲ್ಲಾ ಸನ್ನಿಧಿಗಳಿಗೂ ಬಲಶಾಲಿಗಳಲ್ಲದ ಬಾಲವೃದ್ಧ ಅಬಲೆಯರಿಗೆ ಕಷ್ಟತಮವಾದ ಮಾರ್ಗವಾದರೂ ಉತ್ಸಾಹಿಗಳಾದ ಅನೇಕ ಭಕ್ತರು ಕಂಡು ನಲಿಯುವಂತಿದೆ. ನರನಾರಸಿಂಹ ಮೂರ್ತಿಗಳ ಹೆಸರುಗಳು ಈ ಪ್ರಕಾರವಾಗಿವೆ :--

ಜ್ವಾಲಾ ಅಹೋಬಿಲ ಮಾಲೋಲ
ಕ್ರೋಢ ಕಾರಂ ಕಾರಂಜ ಭಾರ್ಗವ
ಯೋಗಾನಂದ ಛತ್ರವಟ
ಪಾವನ ನವಮೂರ್ತಯೇ

ಈ ಮೂರ್ತಿಗಳಲ್ಲಿ ಜ್ವಾಲಾನರಸಿಂಹ, ಮಾಲೋಲನರಸಿಂಹ ಕ್ರೋಢನರಸಿಂಹ, ಯೋಗಾನಂದ ನರಸಿಂಹರ ಸನ್ನಿಧಿಗಳು ವೇದಾಚಲದ ಬೆಟ್ಟವಾದ ಅರಣ್ಯ ಪ್ರದೇಶದ ಶಿಖರಗಳ ಮೇಲಿವೆ. ಗುಹಾನರಸಿಂಹ, ಪಾವನ ನರಸಿಂಹರ ಸನ್ನಿಧಿಗಳು ಗರುಡಾದ್ರಿಯ ಶಿಖರಗಳ ಮೇಲಿವೆ. ಕಾರಂಜನರಸಿಂಹ, ಪ್ರಹ್ಲಾದ ವರದ ನರಸಿಂಹರ ಸನ್ನಿಧಿಯಿಂದ ಗುಹಾನರಸಿಂಹರ ಸನ್ನಿಧಿಗೆ ಹೋಗುವ ಮಾರ್ಗದಲ್ಲಿದೆ. ಕೆಳಗಿನ ಅಹೋಬಿಲಕ್ಕೆ ಸೇರಿದ ಹಾಗೆ ಛತ್ರವಟ ಸನ್ನಿಧಿ ಹತ್ತಿರದಲ್ಲೇ ಇದೆ. ಆದರೆ ಭಾರ್ಗವ ನರಸಿಂಹರ ಸನ್ನಿಧಿ ತಗ್ಗಾದ ಪ್ರದೇಶದ ಶಿಖರವೊಂದರ ಮೇಲಿದೆ. ಎಲ್ಲಾ ದಿವ್ಯಕ್ಷೇತ್ರಗಳು ಪರಮ ಪಾವನವಾಗಿ ಸೇವನೀಯವಾಗಿವೆ. ಬೆಟ್ಟದ ಮೇಲೆ ಹೋಗುವುದು ಪ್ರಯಾಸಕರವಾದರೂ ಭಗವದ್ದರ್ಶನ ಮಾತ್ರದಿಂದ ಪುಲಕಿತರಾಗಿ ಆನಂದಭರಿತರಾಗುವಂತಹದೂ ನಿಜಕ್ಕೂ ಅನುಭವಿಸಿ ತಿಳಿಯಬೇಕಲ್ಲದೇ ಮಾತಿನಿಂದ ವರ್ಣಿಸಲು ದುಸ್ಸಾಧ್ಯ. ಈ ಕ್ಷೇತ್ರಗಳ ಮಹಿಮೆಯನ್ನು ಹೀಗೆ ಹೇಳುತ್ತಾರೆ:--

ಕಾಶ್ಯಾಂ ಯುಗ ಸಹಸ್ರಾಣಿ,
ಪ್ರಯಾಗೇಯುಗ ವಿಂಶತಿಃ,
ಯುಗಾನಾಂ ಚ ಶತಂ ಚೈವ,
ದಿನ ಮೇಕಂ ಅಹೋಬಲೇ

ಎಂದು ಕಾಶಿಯಲ್ಲಿ ಸಾವಿರ ಯುಗಗಳ ವಾಸ, ಪ್ರಯಾಗದಲ್ಲಿ ಇಪ್ಪತ್ತು ಯುಗಗಳ ನೂರು ಯುಗಗಳ ವಾಸ ಅಹೋಬಿಲದಲ್ಲಿ ಒಂದೇ ದಿನದ ವಾಸಕ್ಕೆ ಸಮ. ಅಂದರೆ ಇಲ್ಲಿಯ ವಾಸದ ಪ್ರಭಾವವೆಷ್ಟೆಂದು ಲೆಕ್ಕಮಾಡಿ ನೋಡಿ.

ನವಗ್ರಂಥ ರತ್ನಗಳು :-- ವಿಶಿಷ್ಟಾದ್ವೈತ ಸಿದ್ಧಾಂತ ನಿರ್ಧಾರಕರಾದ ಭಗವದ್ರಾಮಾನುಜರು, ಮಹಾಯೋಗಿಗಳಾದ, ನಾಲ್ಕು ಸಾವಿರ ದ್ರಾವಿಡ ವೇದ ಪಾಶುರಗಳನ್ನು ಜಗತ್ತಿನಲ್ಲಿ ಪ್ರಚಾರಮಾಡಿದ ನಾಥಮುನಿಗಳ ಶಿಷ್ಯರಾದ ಶ್ರೀರಾಮ ಮಿಶ್ರರೆಂಬುವರ ಪ್ರೀತಿಯ ಶಿಷ್ಯ ಯಾಮುನಾಚಾರ್ಯರೆಂಬವರಲ್ಲಿ (ಇವರು ಆಳವಂದಾರ್ ಎಂದೇ ಪ್ರಸಿದ್ಧ) ಆಶ್ರಯಿಸಬೇಕೆಂದು ಅತ್ಯಂತ ಆಶೆಯಿಂದ ಶ್ರೀರಂಗಕ್ಕೆ ಬಂದಾಗ ಅವರು ಪರಮಪದಿಸಿದ್ದರು. ಅತ್ಯಂತ ನಿರಾಶರಾಗಿ ಅವರ ಪಾರ್ಥಿವಶರೀರದ ಅಂತಿಮ ದರ್ಶನ ಪಡೆಯಲು ಹೋದಾಗ ಅವರ ಬಲಗೈಯ್ಯನ ಮೂರು ಬೆರಳುಗಳು ಮಡಿಚಿದ್ದುವು. ಇದನ್ನು ಕಂಡು ಅಲ್ಲಿ ನೆರದಿದ್ದ ಭಾಗವತ ಗೋಷ್ಠಿಯಲ್ಲಿ ವಿಚಾರಿಸಿದಾಗ, ಮೊದಲು ಹಾಗಿರಲಿಲ್ಲ. ಪರಮಪದಿಸಿದ ಮೇಲೆ ಹೀಗೆ ಮಡಿಚಿಕೊಂಡಿದೆ ಎಂದಾಗ, ಅವರಿಗೆ ಪ್ರಬಲ ಇಷ್ಟಗಳೇನಾದರೂ ಇತ್ತೇ ಎಂದು ವಿಚಾರಿಸಿದಾಗ ಅಲ್ಲಿನವರು ಅಹುದೆಂದರು. ಅದರಲ್ಲೊಂದು ಮಹತ್ವಾಕಾಂಕ್ಷೆ, ಬ್ರಹ್ಮಸೂತ್ರಕ್ಕೆ ಬೋಧಾಯನ ವೃತ್ತಿ ಪ್ರಕಾರ ಭಾಷ್ಯ ಬರೆಯಬೇಕೆಂಬುದು. ಶ್ರೀ ರಾಮಾನುಜರು ಬ್ರಹ್ಮಸೂತ್ರಕ್ಕೆ ಆ ಪ್ರಕಾರವಾಗಿ ಸುಲಭ ಗ್ರಾಹ್ಯವಾಗುವಂತೆ ೧) ವೇದಾಂತಸಾರ ಮತ್ತು ೨) ವೇದಾಂತ ದೀಪಗಳೆಂಬ ಎರಡು ಸಂಗ್ರಹ ವ್ಯಾಖ್ಯಾನಗಳನ್ನು ಬರೆದ

ಮೇಲೆ ವಿಸ್ತೃತವಾದ ಪ್ರೌಢ ವ್ಯಾಖ್ಯಾನವೊಂದನ್ನು ತಮ್ಮ ಪ್ರಿಯ ಶಿಷ್ಯರಾದ ಕೂರತ್ತಾಳ್ವಾರರ ಸಹಾಯದಿಂದ 'ಶ್ರೀ ಭಾಷ್ಯ' ಎಂಬ ಉದ್ಗ್ರಂಥ ಬರೆದರು. ಈ ಗ್ರಂಥದ ಪ್ರೌಢಿಮೆಗೆ ಮೆಚ್ಚಿ ಸಾಕ್ಷಾತ್ ಸರಸ್ವತೀ ದೇವಿಯೇ ಶ್ರೀ ರಾಮಾನುಜರನ್ನು 'ಭಾಷ್ಯಕಾರ' ರೆಂದೇ ಕರೆದರೆಂಬುದು ಪ್ರಸಿದ್ಧಿ. ಆಮೇಲೆ ಭಗವದ್ಗೀತೆಗೆ 'ಗೀತಾಭಾಷ್ಯ' ಬರೆದರು. ಕೇವಲ ವಿವಾದಾಸ್ಪದ ವೇದೋಪನಿಷತ್ ವಾಕ್ಯಗಳ ಸಮಂಜಸಾರ್ಥ ವಿವರಿಸಲು, ವೇದದಲ್ಲಿ ಬರುವ ಜೀವ, ಪರಮಾತ್ಮರು ಭಿನ್ನ ಎಂದು ಸಾರುವ 'ಭೇದಶ್ರುತಿಗಳು' ಜೀವ ಬ್ರಹ್ಮೈಕ್ಯ ತೋರಬಹುದಾದಂತಹ 'ಅಭೇದ ಶ್ರುತಿಗಳು' ಇವುಗಳೊಡನೆ ಎರಡೂ ಯಾವರೀತಿಯಲ್ಲಿ ಒಂದೇ ಅರ್ಥವನ್ನು ಪ್ರತಿಪಾದಿಸುತ್ತವೆ ಎಂದು ಪ್ರಕಾಶಿಸುವ 'ಘಟಕಶ್ರುತಿ'ಗಳನ್ನು ಸಂಗ್ರಹಿಸಿ, ಚಿತ್, ಅಚಿತ್‌ಗಳಿಗೂ ಪರಮಾತ್ಮನಿಗೂ ಇರುವ ಸಂಬಂಧ 'ಶರೀರ ಶರೀರಿಭಾವ ಸಂಬಂಧ' ಎಂದು ಹೇಳಿ ಎಂದೆಂದೂ, ಜೀವ, ಪರಮಾತ್ಮ ಬೇರೆ ಬೇರೆ ಎಂದು ಎರಡೆಂದೂ ತಿಳಿಸಿ, ವೇದದ ವಾಕ್ಯಗಳಲ್ಲಿ ಪರಸ್ಪರ ವಿರೋಧ ಇಲ್ಲವೆಂದೂ, ಎಲ್ಲಾ ಸೂಕ್ತಗಳಿಗೂ ಸಮಂಜಸಾರ್ಥ ಹೇಳಿ ಸಮನ್ವಯಾರ್ಥ ವಿವರಿಸಿ ವೇದದ ಯಾವೊಂದು ವಾಕ್ಯವೂ ವ್ಯರ್ಥವಾಗದಂತೆ ಇರುವುದೆಂದು 'ವೇದಾರ್ಥ ಸಂಗ್ರಹ' ಎಂಬ ಗ್ರಂಥ ದಯಪಾಲಿಸಿದ್ದಾರೆ. ಗೀತೆಯ ಸಾರವಾದ ಶರಣಾಗತಿಯನ್ನೇ ಪ್ರಧಾನವಾಗಿರಿಸಿಕೊಂಡು ತಮಗೂ, ಲಕ್ಷ್ಮೀನಾರಾಯಣರಿಗೂ ನಡೆದ ಸಂಭಾಷಣೆಯನ್ನೇ ಆಧರಿಸಿ ಸಂವಾದರೂಪವಾದ 'ಶರಣಾಗತಿಗದ್ಯ' ಎಂಬುದನ್ನೂ, ಶ್ರೀರಂಗನಾಥನ ವಿಷಯಕವಾದ 'ಶ್ರೀರಂಗಗದ್ಯ' ಎಂಬುದನ್ನೂ, ಆಮೇಲೆ 'ವೈಕುಂಠಲೋಕ ವರ್ಣನಾರೂಪವಾದ' ವೈಕುಂಠಗದ್ಯವನ್ನು ರಚಿಸಿದ್ದಾರೆ. ಭಗವಂತನನ್ನು ಹೇಗೆ ಅರ್ಚಿಸಬೇಕು ಎಂಬ ವಿಷಯ ಕುರಿತು 'ನಿತ್ಯಗ್ರಂಥ' ಎಂಬ ಗ್ರಂಥವನ್ನೂ ರಚಿಸಿ ಒಟ್ಟಿಗೆ ಒಂಬತ್ತು ಗ್ರಂಥಗಳನ್ನು ಬರೆದಿದ್ದಾರೆ. ಹೀಗೆ, ೧) ಶ್ರೀಭಾಷ್ಯ ೨) ಗೀತಾಭಾಷ್ಯ ೩) ವೇದಾರ್ಥ ಸಂಗ್ರಹ, ೪) ವೇದಾಂತಸಾರ, ೫) ವೇದಾಂತದೀಪ, ೬) ಶರಣಾಗತಿ ಗದ್ಯ ೭) ಶ್ರೀರಂಗ ಗದ್ಯ ೮) ವೈಕುಂಠಗದ್ಯ ಮತ್ತು ೯) ನಿತ್ಯಗ್ರಂಥ ಎಂಬ ಗ್ರಂಥರತ್ನಗಳನ್ನು ಲೋಕೋದ್ಧಾರಕ್ಕಾಗಿ ಕೃಪೆಮಾಡಿದ್ದಾರೆ.



# ವಾರ್ತಾಲಹರಿ

## 1995 -- 96 ರ ಆಯವ್ಯಯಪಟ್ಟಿ

### ಅನುಮೋದನೆ

ಮಾರ್ಚ್ 31 ರಂದು ಹೈದರಾಬಾದಿನಲ್ಲಿ ಸಮಾವೇಶಗೊಂಡ ತಿ.ತಿ.ದೇ. ಆಡಳಿತ ಪ್ರಾಧಿಕಾರ (ಸ್ಪೆಸಿಫೈಡ್ ಅಥಾರಿಟಿ) ತಿ. ತಿ. ದೇ ಗಳಿಗಾಗಿ 1995--96 ರ ಅಂದಾಜು ಆಯವ್ಯಯ ಪಟ್ಟಿಯನ್ನು ಅನುಮೋದಿಸಿದೆ. ಅದರಂತೆ 1995--96 ಆದಾಯ 194.97 ಕೋಟಿ ರೂಪಾಯಿಗಳೂ, ವೆಚ್ಚ 193.63 ಕೋಟಿ ರೂಪಾಯಿಗಳೂ ಆಗಿದ್ದು 1.34 ಕೋಟಿ ರೂಪಾಯಿಗಳ ಉಳಿತಾಯವನ್ನು ಸೂಚಿಸಲಾಗಿದೆ. ಈ ಆರ್ಥಿಕ ವರ್ಷದಲ್ಲಿ ವಿವಿಧ ಬಾಬ್ತುಗಳಿಂದ ಬರಬಹುದೆಂದು ಅಂದಾಜಿಸಿದ ಪ್ರಮುಖ ಆದಾಯವಿವರ ಈ ರೀತಿಯಿದೆ -- ಹುಂಡಿ ಮೂಲಕ 69.08 ಕೋಟಿ, ಬಂಗಾರ ಬೆಳ್ಳಿ ಡಾಲರ್ ಮಾರಾಟದಿಂದ 9.70 ಕೋಟಿ, ಕಾಟೇಜುಗಳ ದೇಣಿಗೆಯಾಗಿ 4 ಕೋಟಿ, ಆರ್ಜಿತ ಸೇವೆಗಳ ಮೂಲಕ --18.82 ಕೋಟಿ, ಪ್ರಸಾದಗಳ ಮಾರಾಟದ ಮೂಲಕ --12.39 ಕೋಟಿ, ವಿಶೇಷ ಪ್ರವೇಶ ಟಿಕೆಟ್ ಮೂಲಕ 12.50 ಕೋಟಿ, ಕಾಟೇಜುಗಳ ಬಾಡಿಗೆ ಮೂಲಕ -- 5.98 ಕೋಟಿ, ವಿದ್ಯಾ ಸಂಬಂಧಿತ ಗ್ರಾಂಟ್‌ಗಳು 4.46 ಕೋಟಿ, ಬಡ್ಡಿಗಳ ಮೂಲಕ -- 36.57 ಕೋಟಿ, ಇತರ -- 14.28 ಕೋಟಿ ಮೊದಲಾಗಿ. ಪ್ರಮುಖ ವ್ಯಯದ ಅಂದಾಜು ಈ ರೀತಿಯಿದೆ -- ಸ್ಥಿರಾಸ್ತಿ ವೆಚ್ಚ 28 ಕೋಟಿ, ಪ್ರೋಕ್ತಂ, ದಿಟ್ಟಂ 37.09 ಕೋಟಿ, ಸಿಬ್ಬಂದಿ ವೇತನ 50.05 ಕೋಟಿ, ಇತರ 10.84 ಕೋಟಿ, ಮರಮ್ಮತ್ತು 2.35 ಕೋಟಿ, ವಿವಿಧ ವಿರಾಳಗಳು 28.18 ಕೋಟಿ, ಪರಿಪಾಲನಾ ವ್ಯವಹಾರ 18.10 ಕೋಟಿ ರೂಪಾಯಿಗಳು.

### ಹಲವು ಕಾಟೇಜುಗಳ ಸೇವಾಶುಲ್ಕದಲ್ಲಿ ಹೆಚ್ಚಳ

ತಿರುಮಲೆಯಲ್ಲಿನ ಎಂ.ಬಿ.ಸಿ; ಟಿ.ಬಿ.ಸಿ. ಪ್ರಾಂತ್ಯಗಳಲ್ಲಿನ ಕಾಟೇಜುಗಳ ದಿನಂಪ್ರತಿ ಬಾಡಿಗೆ/ಸೇವಾಶುಲ್ಕವನ್ನು 50 ರೂಪಾಯಿಗಳಿಂದ 75 ರೂಪಾಯಿಗಳೂ, ಎ.ಟಿ.ಸಿ. ಪ್ರಾಂತ್ಯದಲ್ಲಿ 30 ರೂಪಾಯಿಗಳಿಂದ 50 ರೂಪಾಯಿಗಳಿಗೂ ಏರಿಸಲಾಗಿದೆ. ಈ ಹೊಸ ದರಗಳು ಈಗ ಎಂದರೆ ಮೇ 1, 1995 ರಿಂದ ಜಾರಿಗೆ ಬಂದಿವೆ ಎಂದು ವರದಿಯಾಗಿದೆ. ಜೊತೆಗೇ ಆರ್ಜಿತಸೇವೆಗಳಲ್ಲೂ ಹಲವು ರೀತಿಯ ಬದಲಾವಣೆಗಳನ್ನು ತಿ.ತಿ.ದೇ. ಪ್ರಾಧಿಕಾರ ತೀರ್ಮಾನದಿಂದ ಜಾರಿಗೆ ತರಲಾಗಿದೆ. (ಇದರ ಪ್ರತ್ಯೇಕ ಜಾಹೀರಾತು ನೀಡಲಾಗಿದೆ, ಗಮನಿಸಬಹುದು.)

### ಬೆಂಗಳೂರಿನಲ್ಲಿ ವಾದಿರಾಜರ ಆರಾಧನೆ

ಬೆಂಗಳೂರಿನ ಈಜುಕೊಳ ಬಡಾವಣೆಯ ಶ್ರೀ ರಾಘವೇಂದ್ರಸ್ವಾಮಿ ಮಠದಲ್ಲಿ ಅಖಿಲಭಾರತ ಮಾಧ್ವ ಮಹಾಮಂಡಳಿ ಹಾಗೂ ತಿ.ತಿ.ದೇ.ಗಳ ದಾಸಸಾಹಿತ್ಯ ಪ್ರಾಜೆಕ್ಟ್ ಸಂಯುಕ್ತ ಆಶ್ರಯದಲ್ಲಿ ವಾದಿರಾಜರ ಆರಾಧನಾ ಮಹೋತ್ಸವ ಮಾರ್ಚ್ 17, 18, 19 ರಂದು ಯಶಸ್ವಿಯಾಗಿ ನಡೆಯಿತು.

17-3-95 ರಂದು ಸಂಜೆ ಶ್ರೀ ಎಸ್. ವೆಂಕಟರಾಯರು (ಕಾರ್ಯದರ್ಶಿ, ಶ್ರೀರಾಘವೇಂದ್ರಸ್ವಾಮಿ ಮಠ) ಕಾರ್ಯಕ್ರಮದ ಉದ್ಘಾಟನೆಯಾಯಿತು. ದಾಸಸಾಹಿತ್ಯ ಪ್ರಾಜೆಕ್ಟ್ ಪರಿಚಯವನ್ನು ಶ್ರೀ ಕೆ. ವಾದಿರಾಜಾರಾವ್ ಮಾಡಿಕೊಟ್ಟರು. ಸಾಂಪ್ರದಾಯ ಭಜನಗೋಷ್ಠಿ ಶ್ರೀಮತಿ ರೇಖಾ ಪದಕಿ ಅವರ ನೇತೃತ್ವದಲ್ಲಿ ರಾಜಾಜಿನಗರದ ಜಾಹ್ನವಿ ಭಜನಾಮಂಡಳಿ ನಡೆಸಿತು. ಶ್ರೀ ವಿಶ್ವನಾಥ ಭಟ್ಟರು ಮಧ್ವಾಚಾರ್ಯರನ್ನು ಕುರಿತು ಹರಿಕಥೆ ಮಾಡಿದರು.

188-3-95 ರಂದು ಸಂಜೆ ಮತ್ತೀಕೆರೆಯ ಮಾಧ್ವಮಹಿಳಾ ಮಂಡಳಿಯವರು ಶ್ರೀಮತಿ ಶ್ಯಾಮಲಾ ಎನ್. ರಾವ್ ಅವರ ನೇತೃತ್ವದಲ್ಲಿ ಸಾಮೂಹಿಕ ಭಜನೆಯನ್ನು ನಡೆಸಿಕೊಟ್ಟರು. ಬೆಂಗಳೂರಿನ ಶ್ರೀ ಹರಿಯಾಚಾರ್ಯರು ದಾಸಸಾಹಿತ್ಯದಲ್ಲಿ ವಾದಿರಾಜರ ವೈಶಿಷ್ಟ್ಯವನ್ನು ವಿವರಿಸಿದರು. ಶ್ರೀಮತಿ ಗೀತಾ. ಎಚ್. ರಾವ್ ಅವರು ದಾಸರ ಕೃತಿಗಳನ್ನು ಹಾಡಿ ಶ್ರೋತೃಗಳನ್ನು ಭಕ್ತಿರಸ ಲೋಕಕ್ಕೆ ಕೊಂಡೊಯ್ದರು.

19-3-95 ರಂದು ಸುಂದರ ನಗರದ ಮಹಿಳಾ ುಂಡಳಿಯವರು ಶ್ರೀಮತಿ ಶಾಂತಾ ಆರ್. ರಾವ್ ಿವರ ನೇತೃತ್ವದಲ್ಲಿ ಸಾಮೂಹಿಕ ಭಜನೆಯನ್ನುನ ಿಸಿಕೊಟ್ಟರು. ಮೈಸೂರಿನ ಶ್ರೀ ಆನಂದತೀರ್ಥ ಾಗಸಂಪಿಗಿ ಅವರು ವಾದಿರಾಜರ ರಚನಾಶೈ ಿಯ ಬಗ್ಗೆ ವಿವರ ನೀಡಿದರು. ದಾಸಸಾಹಿತ್ಯ ಪ್ರಾಜ ್ಟ್‌ನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ಾಸಸಾಹಿತ್ಯದ ಬಗ್ಗೆ ವಿವರಿಸಿದರು.

ಅಖಿಲಭಾರತ ಮಾಧ್ವ ಮಹಾಮಂಡಳದ ಮಹಿಳಾವಿಭಾಗದ ಅಧ್ಯಕ್ಷ ಶ್ರೀಮತಿ ರುಕ್ಮಿಣೀ ಗಿರಿ ಮಾಜಿ ಅವರು ವಂದನಾರ್ಪಣೆ ಮಾಡಿದರು.



## ಬೆಂಗಳೂರಿನಲ್ಲಿ ವ್ಯಾಸರಾಜ ಆರಾಧನೆ

ಅಖಿಲಭಾರತ ಮಾಧ್ವ ಮಹಾಮಂಡಳ ಹಾಗೂ ತಿ.ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ ಬೆಂಗಳೂರಿನ ಶ್ರೀನಗರದ ಶ್ರೀರಾಘವೇಂದ್ರಸ್ವಾಮಿ ಬೃಂದಾವನ ಟ್ರಸ್ಟ್‌ನಲ್ಲಿ 20, 21, 22, ಮಾರ್ಚ್ 1995 ರಂದು ವ್ಯಾಸರಾಜರ ಆರಾದನಾ ಉತ್ಸವ ನಡೆಯ ಯಶಸ್ವಿಯಾಯಿತು.

20-3-95 ರಂದು ಸಂಜೆ ಫಲಿಮಾರು, ಭಂಡಾರಕೇರಿ ಮಠಾಧೀಶರಾದ ಶ್ರೀ ಶ್ರೀ ವಿದ್ಯಾಮಾನ್ಯ ತೀರ್ಥ ಶ್ರೀ ಪಾದಂಗಳವರು ಆರಾಧನಾ ಉತ್ಸವವನ್ನು ದೀಪವೆಳಗಿಸಿ ಉದ್ಘಾಟಿಸಿದರು. ಶ್ರೀಮತಿಯರಾದ ಪ್ರಮಿಳಾ ಗುರುರಾಜ್, ಪರಿಮಳ ವಾದಿರಾಜ, ಸರ್ವಶ್ರೀ ರಾಘವೇಂದ್ರ ಮಾನ್ವೀಕರ್, ಕೆ. ಜಿ. ರಾವ್, ವಸಂತಕುಮಾರ್ ಪರಿಗಿ, ಕೆ. ಅಪ್ಪಣ್ಣಾಚಾರ್ಯ ಅವರುಗಳು ಮುಖ್ಯ ಅತಿಥಿಗಳಾಗಿದ್ದರು. ಸಂಪ್ರದಾಯ ಭಜನಕಾರ್ಯಕ್ರಮದ ನಂತರ ಶ್ರೀಮತಿ ನಾಗವಲ್ಲಿ ನಾಗರಾಜ್ ಅವರ ಸಂಗೀತ ಮನಸೆಳೆಯಿತು. ಶ್ರೀ ಹರಿದಾಸಭಟ್ಟರು ವ್ಯಾಸರಾಯರ ಚರಿತ್ರೆಯನ್ನು ವಿವರಿಸಿದರು.

21-3-95 ರಂದು ವಿಶೇಷವಾಗಿ ಕಾರ್ಯಕ್ರಮ ನಡೆಯಿತು. ಹರಿದಾಸಸಾಹಿತ್ಯದಲ್ಲಿ ಕ್ವಿಜ್ ಕಾರ್ಯಕ್ರಮ, ಹರಿದಾಸ ಕೀರ್ತನೆಗಳ ಅಂತ್ಯಾಕ್ಷರಿ ಕಾರ್ಯಕ್ರಮದಲ್ಲಿ ಹೊಸ ಉತ್ಸಾಹದಿಂದ ಜನ ಪಾಲುಗೊಂಡರು. ಶ್ರೀನಿವಾಸ ಕಲ್ಯಾಣ ಮುಯ್ಯ ಕಾರ್ಯಕ್ರಮವೂ ಆಕರ್ಷಿಸಿತು. ಶ್ರೀನಗರದ ಹರಿದಾಸ ಭಜನ ಮಂಡಳಿಯ ವತಿಯಿಂದ ಸಾಮೂಹಿಕ ಭಜನ ಗೋಷ್ಠಿಯ ನಂತರ ದಾಸಸಾಹಿತ್ಯದಲ್ಲಿ ವ್ಯಾಸರಾಯರ ವೈಶಿಷ್ಟ್ಯವನ್ನು ಕುರಿತು ಶ್ರೀ ಬಾಳಗಾರು ಶ್ರೀನಿವಾಸಾಚಾರ್ಯರು ವಿದ್ವತ್ಪೂರ್ಣ ವಿಮರ್ಶೆ ನೀಡಿದರು.

22-3-95 ರಂದು ಸಂಜೆ ಸಂಪ್ರದಾಯ ಭಜನ ಗೋಷ್ಠಿಯ ನಂತರ ಶ್ರೀ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು ವ್ಯಾಸರಾಯರ ಸಾಹಿತ್ಯದ ಬಗ್ಗೆ ವಿವರ ನೀಡಿದರು. ಶ್ರೀ ಭದ್ರಗಿರಿ ಅಚ್ಯುತದಾಸರು ವ್ಯಾಸರಾಯರು ಹರಿಕಥೆಯನ್ನು ಮಾಡಿದರು.

ಅ.ಭಾ.ಮಾ.ಮ.ದ ಮಹಿಳಾ ವಿಭಾಗದ ಬೆಂಗಳೂರು ದಕ್ಷಿಣ ಪ್ರಾಂತ್ಯ ಕಾರ್ಯದರ್ಶಿ ಶ್ರೀಮತಿ ರಾಜ್ಯಲಕ್ಷ್ಮಿ ಪಾರ್ಥಸಾರಥಿಯವರು ವಂದನಾರ್ಪಣೆ ಮಾಡಿದರು.



## ಭಜನಾಮಂಡಳಿ ಸಂಘಟನಾ ಸಮಾವೇಶ

ರಾಯಚೂರಿನ ಶಕ್ತಿನಗರದಲ್ಲಿ ಶ್ರೀ ಕೊರವರೇಶ ಭಜನ ಮಂಡಳಿ ಹಾಗೂ ತಿ. ತಿ.ದೇ. ದಾಸಸಾಹಿತ್ಯ ಪ್ರಾಜೆಕ್ಟ್ ಸಂಯುಕ್ತ ಆಶ್ರಯದಲ್ಲಿ ಎರಡು ದಿನಗಳ ಭಜನಾಮಂಡಳಿಗಳ ಸಂಘಟನಾ ಸಮಾವೇಶ ಏಪ್ರಿಲ್ 13, 14, ರಲ್ಲಿ ಸಂಪನ್ನವಾಯಿತು.

ಹನ್ನೆರಡು ಭಜನಾಮಂಡಳಿಗಳ ಸಾವಿರಕ್ಕೂ ಮಿಕ್ಕಿದ ಪ್ರತಿನಿಧಿಗಳು ಭಾಗವಹಿಸಿದ್ದ ಸಮಾವೇಶದಲ್ಲಿ ಭಜನ ಮಂಡಳಿಗಳ ಕಾರ್ಯಕ್ರಮವಿಧಾನ, ಊರ ಮೆರವಣಿಗೆಯಲ್ಲಿನ ಶಿಸ್ತು ಸಂಘಟನೆ, ದೈವ ಭಕ್ತಿಯಲ್ಲಿ ಭಜನೆ ಸ್ತೋತ್ರಗಳ ಪಾತ್ರ, ಭಜನಾನುಕೂಲಿ ಉಪಕರಣಗಳ ಪಾಂಡಿತ್ಯ ತರಬೇತಿ, ಭಜನ ಸಾಹಿತ್ಯದ ವಿವರಗಳನ್ನು ಕುರಿತು ಶ್ರೀ ನಾಗೇಂದ್ರಪ್ಪ ಸಾವ್ ಹಾಗೂ ಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ ಅವರುಗಳು ವಿವರಿಸಿದರು. ಅನಂತಪುರದ ಅಷ್ಟಾವಧಾನಿ ಸದಾನಂದ ಶಾಸ್ತ್ರಿ ಅವರು ಹರಿಕಥೆ ನಡೆಸಿಕೊಟ್ಟರು. ದಾಸಸಾಹಿತ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ಭಜನಾಮಂಡಳಿಗಳ ಸಂಘಟನೆ, ಭಜನೆಯ ಹಾಡುಗಳಲ್ಲಿನ ಏಕರೂಪತೆ, ಹರಿದಾಸರುಗಳ ಆರಾಧನೆಯ ಮಹತ್ವಗಳನ್ನು ವಿವರಿಸಿ ಸೂತ್ರಧಾರರಾಗಿ ಕೆಲಸ ನಿರ್ವಹಿಸಿದರು.

☆☆☆☆☆☆☆☆☆☆☆

# ಮಾಜಿ ಸಂಪಾದಕರ ನಿಧನ



ಸಪ್ತಗಿರಿ ಪತ್ರಿಕೆಯ ಪ್ರಥಮ ಸಂಪಾದಕರಾಗಿ 1994 ಜೂನ್ ತಿಂಗಳಿನಲ್ಲಿ ನಿವೃತ್ತರಾದ ಶ್ರೀ ಕಾಟ್ರಪಾಟಿ ಸುಬ್ಬರಾವ್ ಅವರು 1995ರ ರಾಮನವಮಿಯಂದು 9-4-95 ರಂದು ಬೆಳಗ್ಗೆ ಮದರಾಸಿನ ಅಪೋಲೊ ಆಸ್ಪತ್ರೆಯಲ್ಲಿ ನಿಧನರಾದರೆಂದು ತಿಳಿಸಲು ವಿಷಾದವೆನ್ನಿಸುತ್ತದೆ. ಮೃತರಿಗೆ ಪತ್ನಿ ತಾಯಿ, ಹಾಗೂ ಒಂದು ಹೆಣ್ಣು ಒಂದು ಗಂಡು ಸಂತಾನ. ಜೊತೆಗೆ ಅಪಾರ ಅಭಿಮಾನಿ ಸಾಹಿತ್ಯಪ್ರಿಯ ಬಳಗ.

ಗುಂಟೂರಿನ ತಕ್ಕೆಳ್ಳ ಪಾಡುಗ್ರಾಮದ ಶ್ರೀ ಚಂದ್ರಶೇಖರಸ್ವಾಮಿಯ ಮಡಿಲಲ್ಲಿ ಹುಟ್ಟಿ ಬೆಳೆದ ಸುಬ್ಬರಾಯರು ತೆಲುಗು ಭಾಷೆಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಾದ ಮೇಲೆ ಆಂಧ್ರ ಪತ್ರಿಕೆಯಲ್ಲಿ ಹಲವು ಕಾಲ ಉಪಸಂಪಾದಕರಾಗಿ ಪತ್ರಿಕಾವ್ಯವಸಾಯವನ್ನು ಅಭ್ಯಾಸ ಮಾಡಿ 1963 ರಲ್ಲಿ ತಿ. ತಿ. ದೇವಸ್ಥಾನಗಳನ್ನು ಸೇರಿ ಆಗ್ಗೆ ದ್ವಿಭಾಷಾ ಮಾಸಪತ್ರಿಕೆಯಾದ ತಿ.ತಿ.ದೇ. ಜರ್ನಲ್ ಅನ್ನು ಜನಮನ್ನಣೆಯ ಹಾದಿಯಲ್ಲಿ ತಿದ್ದುವ ಕಾರ್ಯದಲ್ಲಿ ತೊಡಗಿಸಿಕೊಂಡರು. 1970 ರಲ್ಲಿ ಐದು ಭಾಷೆಯಲ್ಲಿ ಪ್ರತ್ಯೇಕತೆಯನ್ನು ಉಳಿಸಿಕೊಳ್ಳುವಂತೆ, ಹೈಂದವ ಧರ್ಮದ ಏಕತೆಯ ಸೂತ್ರದಲ್ಲಿ ಕನ್ನಡ, ಹಿಂದಿ, ತೆಲುಗು, ತಮಿಳು, ಆಂಗ್ಲಭಾಷೆಗಳಲ್ಲಿ "ಸಪ್ತಗಿರಿ" ಹೆಸರಿನಲ್ಲಿ ಮಾಸ ಪತ್ರಿಕೆಯನ್ನು ಹೊರತಂದರು. ಅವರು ನಿವೃತ್ತರಾಗುವ ಹೊತ್ತಿಗೆ ಸಪ್ತಗಿರಿಯ ಪ್ರಸಾರ ಪ್ರಮಾಣ ಎಪ್ಪತ್ತು ಸಾವಿರಕ್ಕೆ ಮುಟ್ಟಿದ್ದು ಅವರ ಜೀವನಾವಧಿಯ ಒಂದು ಅತಿ ಎತ್ತರದ ಸಾಧನಾಸೂಚಿಯಾಗಿದ್ದಿತು.

ಸಪ್ತಗಿರಿಯ ಸಂಪಾದಕರು ಆಗಿ ಕಾರ್ಯ ನಿರ್ವಹಿಸುತ್ತಲೇ ಅವರು ಸಪ್ತಗಿರಿಯ ವಿತರಣಶಾಖೆಯ ಹಾಗೂ ತಿ.ತಿ.ದೇ. ಪ್ರಕಟಣ ಶಾಖೆಯ ಮೇಲುಸ್ತುವಾರಿಯನ್ನೂ ನಡೆಸಿದರು. ಅವರ ಸಂಪಾದಕತ್ವದಲ್ಲಿ 1963 ರಿಂದಲೂ ಹಲವಾರು ಮೌಲಿಕ, ಜನಪ್ರಿಯ ಪುಸ್ತಕಗಳನ್ನು ತಿ.ತಿ.ದೇ. ಪ್ರಕಟಿಸಿತು. ಋಗ್ವೇದ (ತೆಲುಗು), ಮಹರ್ಷುಲ ಕಥಲು, ಭಾರತೀಯ ತತ್ವಶಾಸ್ತ್ರಮು, ಪೋತನ ಭಾಗವತ, ಕರ್ಮಯೋಗ ಶಾಸ್ತ್ರಮು (ತಿಲಕರ ಗೀತಾವ್ಯಾಖ್ಯಾನದ ತೆಲುಗು ಆವೃತ್ತಿ) ಮೊದಲಾದ ಪುಸ್ತಕಮಾಲೆಗಳು ಅತ್ಯಲ್ಪಕಾಲದಲ್ಲಿ ಹೊರಬರುವಂತೆಯೂ, ವಿವಾಹ ಸಂಸ್ಕೃತಿ, ನಮ್ಮ ಸಮಸ್ಯೆಗಳಿಗೆ ಭಗವದ್ಗೀತೆಯ ಪರಿಷ್ಕಾರ, ಶಿಷ್ಟಾ ಸುಬ್ಬಾರಾಯರ ಭಗವದ್ಗೀತಾ ವ್ಯಾಖ್ಯಾನ, ಉಪಶ್ರೀಯವರ ರಾಮಾಯಣ, ಭಾರತ, ಭಾಗವತಗಳು, ರಾವುಲ ಭಗವದ್ಗೀತಾ ತಾತ್ಪರ್ಯ, ಮುಂತಾದ ಜನಪ್ರಿಯ ಪುಸ್ತಕಗಳ ಮುದ್ರಣ, ಮರು ಮುದ್ರಣಗಳಲ್ಲಿ ಮೂಲಕಾರಕರಾಗಿಯೂ, ಜೊತೆಗೇ ಹಲವಾರು ತಮಿಳು, ಆಂಗ್ಲ, ಹಿಂದಿ ಗ್ರಂಥಗಳೂ ಅವರ ದೂರದೃಷ್ಟಿಯ, ಕಾರ್ಯಗೌರವದ ಮನೋಭೂಮಿಕೆಯಿಂದಾಗಿ ಓದುಗರನ್ನು ಮುಟ್ಟುವಲ್ಲಿ ಯಶಸ್ವಿಯಾದವು. ತಿ.ತಿ.ದೇ. ಪ್ರಕಟನಾ ಶಾಖೆಯ ಮೇಲುಸ್ತುವಾರಿ ಒಂದು ಬಗೆಯದಾದರೆ ಅವರು ಕೈಹಿಡಿದು ನಡೆಸಿದ ಲೇಖಕ ಸಹಾಯಧನದ ಯೋಜನೆಯನ್ನೊಂದು ಮೈಲುಗಲ್ಲು ಎನ್ನಬಹುದು. 1979 ರಲ್ಲಿ ಆರಂಭವಾದ ಈ ಯೋಜನೆಯ ಸಂಚಾಲಕ ಸದಸ್ಯರಾಗಿ ಹಲವಾರು ಸಾವಿರ ಧಾರ್ಮಿಕ ಪುಸ್ತಕಗಳನ್ನು ಬೇರೆ ಬೇರೆ ಲೇಖಕರು ಬೇರೆ ಬೇರೆ ಭಾಷೆಗಳಲ್ಲಿ ಪ್ರಕಟಿಸಲು ನೆರವಾದರು.

ಸಾಹಿತ್ಯ ಪರಿಚಾರಕ ಕ್ರಿಯೆಯಲ್ಲಿನ ಈ ಪಾತ್ರದೊಡಗೆ ಸಾಹಿತ್ಯ ವಿಮರ್ಶೆ, ಸೃಷ್ಟಿಯಲ್ಲೂ ಅವರ ಪಾತ್ರ ಗಣನೀಯವಾದದ್ದು ಎನ್ನಲಡ್ಡಿಯಿಲ್ಲ. ಶ್ರೀನಿವಾಸ ಕಲ್ಯಾಣ ನಾಟಕ, (ಶ್ರೀ ಟಿ. ಎಲ್. ಸುಬ್ಬರಾಯರೊಡನೆ) ಧರ್ಮದೀಪಿಕಲು (ಸಂಪಾದಕೀಯ ಸಂಪುಟ) ಭಗವದ್ಗೀತಾವ್ಯಾಖ್ಯಾನ (ಮುದ್ರಿತ) ಮುಂತಾದವು ಅವರ ಆರ್ಷ ಪರಂಪರೆಯು ಆಧುನಿಕ ವಿಜ್ಞಾನದೊಡನೆ ಮೇಳವಿಸಿ ಹುಟ್ಟಿದ ನವನೀತವೆನ್ನಬೇಕು.

ಅನ್ನಮಾಚಾರ್ಯ ಕೃತಿಗಳ ಸಾಹಿತ್ಯಕ ಪ್ರಚಾರ ಕಾರ್ಯದಲ್ಲಿ ಅವರ ಪಾತ್ರ ಅದ್ವಿತೀಯ. ದಿವಂಗತ ಗೌರಿಪೆದ್ದಿ ರಾಮಸುಬ್ಬಶರ್ಮರು ಅನ್ನಮಾಚಾರ್ಯರ ಎಲ್ಲ ಉಪಲಬ್ಧ ಕೃತಿಗಳನ್ನೂ ಸಂಪಾದಿಸಿ ನೀಡಿದ್ದನ್ನು ಮುದ್ರಿಸುವಲ್ಲಿ, ಸಪ್ತಗಿರಿಯಲ್ಲಿ ಅನ್ನಮಾಚಾರ್ಯರ ಸಾಹಿತ್ಯದ ಸುಳಿವು ಸೂಕ್ಷ್ಮಗಳನ್ನು ವಿದ್ವಾಂಸರ ಮೂಲಕ ಅವಿಚ್ಛಿನ್ನವಾಗಿ ವಿವರಿಸುವಲ್ಲಿ ಓದುಗರು ಮೆಚ್ಚುವಂತಹ ಕೆಲಸವನ್ನು ಅವರು ನಿರ್ವಹಿಸಿದರು.

ಅಪಾರ ಅಭಿಮಾನಿಗಳನ್ನು ಹಿಂದೆ ಬಿಟ್ಟು ನಡೆದಿರುವ ಅವರ ಆತ್ಮಕ್ಕೆ ಶ್ರೀ ವೆಂಕಟೇಶ್ವರ ಸ್ವಾಮಿ ಶಾಂತಿಯನ್ನು ನೀಡಲೆಂದು ಸಪ್ತಗಿರಿ ಹಾರೈಸುತ್ತದೆ.

ಯುವ ವರ್ಷ ರಾಮನವಮಿಾ
ರವಿವಾಸರದೋಳು
ಸುಬ್ಬರಾಯ ಮನೀಷಿ
ಪ್ರವರತಾ ಕಲಿ ಹಾರಕ
ಭವತಾರಕ ವೆಂಕಟೇಶ
ಪದಗತ ನಾದನ್

ಆದರ ಪೊಪ್ಪೆ ಸಪ್ತಗಿರಿಯಾತನು
ಮುವ್ವತು ವತ್ಸರಂಸುಸಂ
ಪಾದಕ ಮುಖ್ಯರಾಗಿ ನಡೆಸುತ್ತಲಿ
ಹೌದೆನೆ ಪಂಚ ಭಾಷಿಗರ್
ವಾದಗಳನ್ನರಿಯರವರೆಲ್ಲರಿ
ಗೊಳ್ಪಿದ ಸುಬ್ಬರಾವು
ಸ್ವಾದು ವಚಸ್ವಿ ಕಾಯವನು
ಬಿಟ್ಟುದ ಕೇಳಲು ಕಣ್ತುಂಬಿತ್ತೈ

ಚೆಣ್ಣರಲಿ ಪ್ರೇಮ ದೊಡ್ಡವರೆಡೆ ಭಕ್ತಿ
ಮತ್ತೆ ಸತ್ಯ ಧರ್ಮ ವರ್ತನೆಯವ
ಖ್ಯಾತಿ ವೆತ್ತ ಕಾಟ್ರಪಾಟಿ ಕುಲೀನನಂ
ಮರೆಯಲಹುದೆ ಬುಧ ಸಮಾಜ ಜನಕೆ

--ಮುದಿವರ್ತಿ ಕೊಂಡಮಾಚಾರ್ಯ.

(ತೆಲುಗಿನಲ್ಲಿ ಐವತ್ತಕ್ಕೂ ಹೆಚ್ಚಿನ ಕೃತಿಗಳನ್ನು ಬರೆದ ಕವಿ ಕೊಂಡಮಾಚಾರ್ಯರು ತಿ.ತಿ.ದೇ. ಪ್ರಕಟನ ವಿಭಾಗದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಅನ್ನಮಾಚಾರ್ಯರ ಕೀರ್ತನೆಗಳನ್ನು ಸೀಸಪದ್ಯಗಳಲ್ಲಿ ಪರಿವರ್ತಿಸಿದವರು ಅವರು. ದಿವಂಗತರ ಬಗ್ಗೆ ಬರೆದ ಒಂದು ಶೋಕಪದ್ಯದ ತುಣುಕು ಇಲ್ಲಿ ಕನ್ನಡಾನುವಾದವಾಗಿದೆ.)

Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

